 Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ವಿ ಲಾ ಪ

ಕಳಿಸಿದವರು :
ಪಿ. ರಾಯಪ್ಪ ಬಸ್ತಿ, ಕಣಬರಗಿ

ಶೀಘ್ರದಲ್ಲೇ ಬರಲಿದೆ!

ಸಂಸ್ಥಾನದ ಪ್ರಮುಖ ಕೇಂದ್ರಗಳ ನಿಮ್ಮ ನೆಚ್ಚಿನ ಚಿತ್ರಮಂದಿರಗಳಲ್ಲಿ

ಜೂಪಿಟರ್ & ಸಂಗೀತಾರವರ

# ಜಮೀನ್‌ದಾರ್

(ತಮಿಳು)



ಮಾಧುರಿದೇವಿ ★ ಎಸ್. ಎ. ನಟರಾಜನ್ ★ ಎಂ. ವಿ. ರಾಜಮ್ಮ

ನಿರ್ದೇಶನ: ಪಿ. ವಿ. ಕೃಷ್ಣನ್ * ಸ್ಟುಡಿಯೋ: ಸೆಂಟ್ರಲ್

YASODHARA RELEASE

## ಈ ಸಂಚಿಕೆಯಲ್ಲಿ



ಇವಲ್ಲದೆ ಇಂದ್ರಜಾಲ, ತಪ್ಪು ಚಿತ್ರ, ಸ್ಪರ್ಧೆ, ಮೊದಲಾದುವೂ ಇವೆ.

# ಚಂದಾದಾರರು



## ಮುಖ್ಯವಾಗಿ ಗಮನಿಸುವುದು

೧. ಚಂದಾದಾರರು ನಮಗೆ ಬರೆಯುವ ಪತ್ರಗಳಲ್ಲಿ ತಮ್ಮ ಚಂದಾ ನಂಬರನ್ನು ತಪ್ಪದೆ ಉದಾಹರಿಸಬೇಕು. ಚಂದಾ ನಂಬರು ಇಲ್ಲದ ಪತ್ರಗಳು ನಮ್ಮ ಪರಿಶೀಲನೆಗೆ ಬಾರವು.

೨. ವಿಳಾಸವು ಬದಲಾವಣೆಯಾದರೆ, ಕೂಡಲೇ ತಮ್ಮ ಹೊಸ ವಿಳಾಸವನ್ನು ಸ್ಪಷ್ಟವಾಗಿ ನಮಗೆ ಬರೆಯಬೇಕು.

೩. ಸಂಚಿಕೆಗಳು ಸೇರದಿದ್ದರೆ, ಆಯಾ ತಿಂಗಳು ೧೦ ನೇ ತಾರೀಕಿನೊಳಗೆ ನಮಗೆ ತಿಳಿಸಬೇಕು. ಅನಂತರ ಬರುವ ದೂರುಗಳು ಗಮನಿಸಲ್ಪಡಲಾರವು.

—ಮೇನೆಜರ್, "ಚಂದಮಾಮ"



## ತಲೆ ಹೊಟ್ಟು ಆಗುವುದು ಅಷ್ಟು ಅಪಾಯವೇ?

ನೂತನ ವಿಶ್ವಕೋಶದ ಪ್ರಕಾರ 'ತಲೆ ಹೊಟ್ಟು' ಅಂಟುರೋಗವೆಂತಲೂ, ಅದನ್ನು ಗುಣಪಡಿಸುವುದು ಅಸಾಧ್ಯವೆಂತಲೂ, ಇದರಿಂದ **ವಿಕೇಶ ತಲೆ** ಆಗಬಹುದೆಂದೂ ತಿಳಿದು ಬರುತ್ತದೆ.

ಆದರೆ ಇದನ್ನು ಸಹ ತಡೆಗಟ್ಟಬಹುದು ಮಾತ್ರ ತಪ್ಪದೆ ಉಪಯೋಗಿಸಿದರೆ

## Godrej ಗೋಡ್ರೆಜ್ ರಿಜಿಸ್ಟರ್ಡ್ ಹೇರ್ ಟಾನಿಕ್



ಇದರಲ್ಲಿ ಜಿ-೧೧ (ಪ್ರಪ್ರಂಚ ಪ್ರಸಿದ್ಧ ಕ್ರಿಮಿನಾಶಕ; ಯುರೋಪ ಮತ್ತು ಅಮೇರಿಕಾದಲ್ಲಿ ಗುಣಕಾರವೆಂದು ಸಿದ್ಧಿಪಡಿಸಿದೆ) ಸೇರಿದೆ.

ತಲೆ ಚರ್ಮಕ್ಕೆ ಇದರಿಂದ ಯಾವ ಅಪಾಯವೂ ಇಲ್ಲ.

ತಂಪು ಮತ್ತು ಚೈತನ್ಯದಾಯಕ.

ಉಷ್ಣಪ್ರದೇಶಗಳಿಗೆ ಆದರ್ಶವಾದದ್ದು.

**ಇಂಡಿಯಾದಲ್ಲೆಲ್ಲಾ ಈ ಮಾದರಿಯ ಇದೊಂದೇ ಟಾನಿಕ್**

**ಗೋಡ್ರೆಜ್ ಸೋಪ್ಸ್ ಲಿ.**

ಚಂದಮಾಮ
ಮಕ್ಕಳ ಕತೆಯ ಮಾಸಪತ್ರಿಕೆ

ಸಂಪುಟ ೯]     ಸೆಪ್ಟೆಂಬರ್ ೧೯೫೭     [ಸಂಚಿಕೆ ೩

# ಸರಸ್ವತಿ

ಸರಸಿಜಾನನೆ ದೇವಿ ಬಾರೆಮ್ಮ ಬಳಿಗೆ
ಪರಮ ಹರುಷವನಿತ್ತು ಬಾ ನಮ್ಮ ಇಳೆಗೆ.

ರಕ್ಷಿಸೆಮ್ಮನು ಸಕಲ ಸೌಭಾಗ್ಯ ಕೊಟ್ಟು
ಅಕ್ಷರವ ಕಲಿಸೆಮಗೆ ಬಲು ಪ್ರೀತಿಯಿಟ್ಟು.

ಸ್ವರ್ಗ ಸುಖವನು ಕರುಣಿಸೆಂದು ಬೇಡುವೆವು
ಮಾರ್ಗ ತೋರಿಸೆನುತ್ತ ನಿನ್ನ ಹಾಡುವೆವು.

ತಿರುತಿರುಗಿ ನಿನ್ನ ಕರೆಯುವೆವು ಗುಣವತಿಯೇ
ವರಗಳನು ಕೊಡು ನಮಗೆ ಬಾ 'ಸರಸ್ವತಿ' ಯೇ!

ಬರೆದವಳು: ಕಾನ ಸರಸ್ವತಿ.



# ಸ್ನೇಹಧರ್ಮ





ಒಂದು ಊರಿನಲಿ ಒಂದಾಗಿರುವ
ಹುಡುಗರ ಜತೆಯೊಂದಿತ್ತು
ಬುದ್ಧಿ ತಿಳಿದಾಗಿಂದಾ ಇಬ್ಬರ
ಜತೆಯೂ ಹೊಂದಿತ್ತು.

ಹೆತ್ತವರಾರೋ ಅದುಗೊತ್ತಿಲ್ಲ
ಮನೆಯೂ ಮಠವೇನಿಲ್ಲ
ಹೊಟ್ಟೆಗೆ ಬಟ್ಟೆಗೆ ಗತಿಯೇ ಇಲ್ಲ,
ಆದರವರು ಜತೆಬಿಟ್ಟಿಲ್ಲ.

ಅಲ್ಲೀ ಇಲ್ಲೀ ತಿರುಗಾಡುವರು
ಸಿಕ್ಕಿದ್ದನು ತಿನ್ನುವರು.
ಚಿಂದಿ ಚೂರುಗಳ ತೊಟ್ಟುಕೊಂಡು
ಉತ್ಸಾಹದಿ ನಲಿಯುವರು.

ಮಳೆಬಿಸಿಲಿಗೆ ಮರಗೋಡೆಯು ಬುಡವೂ
ಎಲ್ಲಿಯೂ ನಿಲ್ಲುವರು.
ಪ್ರಕೃತಿ ಮಾತೆಯ ಮಕ್ಕಳಹಾಗೆ
ಕಾಣಿಸುವರು ಅವರು.

ಅವರನು ನೋಡಿದ ಜನರನುತಿದ್ದರು
" ಅಣ್ಣತಮ್ಮ " ರೆಂದವರ.
ವಾಸ್ತವದಲಿ ಅವರಣ್ಣತಮ್ಮಂದಿ
ರಲ್ಲ—ಬಲ್ಲೆವವರ.

ಹುಟ್ಟಿದಾಗಿನಾ ತಬ್ಬಲಿತನವೇ
ಅವರನು ಜತೆಗೊಳಿಸಿತ್ತು.
ಸ್ನೇಹವು ಬಲಿತೂ ಬಿಗಿದೂ ಅಂಟೇ
ಅವರ ಬಂಧಿಸಿತ್ತು.

ಚಳಿಗಾಲದಿ ಒಂದುದಯಕಾಲದಿ
ಎದ್ದರು ಬಲುಹಸಿವಿಂದ,
ಎಲ್ಲೇನಾದರು ದೊರೆವುದೋ ಎಂದು
ಹುಡುಕಿದರಾತುರದಿಂದ.

ಬೀದಿಯ ಹಿಡಿದು ನಡೆಯಲು ಅಲ್ಲಿ
ಕಿತ್ತಿಳೆ ಹಣ್ಣೊಂದಿತ್ತು.
ದೊಡ್ಡವ ಮುಂದೆ ಓಡಿದ ಬೇಗ
ಹಣ್ಣು ಅವನಿಗೇ ಸಿಕ್ಕಿತ್ತು.

ಬೇಗಬೇಗನೇ ಸಿಪ್ಪೆಯತೆಗೆದು
ತಿನ್ನಲು ಅಣಿಯಾದ.
ಆಗಲೆ ತನ್ನ ಜತೆಯಲ್ಲಿರುವಾ
ಹುಡುಗನ ತಾನೆನೆದ.

ಸಣ್ಣವನೆಂಬಾ ದಯದಿಂದೊಡನೆ
ಇಡಿ ಹಣ್ಣವನಿಗೆ ಕೊಟ್ಟ.
"ಅಯ್ಯೋ ಅವಸರಪಟ್ಟೆನೆ" ಎಂದು
ತುಸು ಬೇಸರಪಟ್ಟ.

ಸಣ್ಣವನೊಳ್ಳೆವ—ಅರ್ಧ ಹಣ್ಣನು
ದೊಡ್ಡವಗೂ ಕೊಟ್ಟ.
ಇಬ್ಬರಿಗೂ ಸಮವಾಗುವಹಾಗೆ,
ಹಂಚಿ ಕೊಟ್ಟನಾ ದಿಟ್ಟ.

ಇತರರು ನಿನ್ನಲಿ ಹೇಗಿರಬೇಕೆಂ
ದೆಣಿಸುವಿಯೋ ನೀನವರಲ್ಲಿ,
ಆ ರೀತಿಯಲೇ ವರ್ತಿಸಬೇಕೆಂ
ದೀಕತೆ ತಿಳಿಸುವುದಿಲ್ಲಿ.






"ನವಗಿರಿನಂದ"



1



2



3



4



5



6



7




೮



9

ಇಲ್ಲಿ ಒಂಭತ್ತು ಚಿತ್ರಗಳಿವೆ. ಇವುಗಳಲ್ಲಿ ಪತ್ರಿಚಿತ್ರದಲ್ಲಿಯೂ ನಮ್ಮ ಚಿತ್ರಗಾರರು ಒಂದೊಂದು ತಪ್ಪು ಮಾಡಿದ್ದಾರೆ. ಆ ತಪ್ಪನ್ನು ನೀವು ಕಂಡುಹಿಡಿಯಬಲ್ಲಿರಾ? ಸರಿಯಾದ ಉತ್ತರಕ್ಕೆ ಬರುವತಿಂಗಳು "ಚಂದಮಾಮ" ನೋಡಿರಿ.

# ಡಿಸಂಬರ್ ಹೂ

ಹಿಂದೆ ರಷ್ಯಾದೇಶದ ಒಂದು ಹಳ್ಳಿಯಲ್ಲಿ ಒಬ್ಬ ಶ್ರೀಮಂತನು ವಾಸವಾಗಿದ್ದನು. ಅವನಿಗೆ 'ಸೋನಿಯಾ' ಎಂಬ ಒಬ್ಬಳು ಮಗಳಿದ್ದಳು. ಸೋನಿಯಾಳ ತಾಯಿ. ಅವಳ ಬಾಲ್ಯದಲ್ಲಿಯೆ ಸತ್ತುಹೋಗಿಬಿಟ್ಟಿದ್ದಳು. ಆದುದರಿಂದ ಅವಳ ತಂದೆ ಇನ್ನೊಂದು ಮದುವೆ ಮಾಡಿಕೊಂಡಿದ್ದನು. ಎರಡನೆ ಹೆಂಡತಿಗೆ 'ನಟಾಷಾ' ಎಂಬ ಮಗಳು ಹುಟ್ಟಿದ್ದಳು.

ತಾಯಿಗೆ ಸವತಿಮಗಳಾದ ಸೋನಿಯಾಳ ಮೇಲೆ ಅಸೂಯೆ ಹೆಚ್ಚುತ್ತಾ ಬಂತು. ಆ ತಾಯಿಯೂ ಮಗಳೂ ಸೇರಿಕೊಂಡು ಸೋನಿಯಾಳಿಗೆ ಯಮಯಾತನೆ ಕೊಡುತ್ತಿದ್ದರು.

ಸೋನಿಯಾಳು ಬಲು ಚೆಲುವೆಯಾದ ಹುಡುಗಿ. ಬಹಳ ಬುದ್ಧಿವಂತೆ. ಮಲತಾಯಿ ಎಷ್ಟುಬಾಧೆ ಕೊಟ್ಟರೂ ತಾಳಿಕೊಂಡಿದ್ದಳು. ತನ್ನಮೇಲೆ ಬಿದ್ದ ಎಲ್ಲಾ ಮನೆಕೆಲಸಗಳನ್ನೂ ಸಂತೋಷದಿಂದಲೇ ನಿರ್ವಹಿಸುತ್ತಿದ್ದಳು. ಇದೆಲ್ಲಾ ತಂದೆಗೂ ಗೊತ್ತು. ಗೊತ್ತಿದ್ದೂ ಅವನು ಮೌನವಾಗಿದ್ದನು.

ಏನಾದರೂ ವ್ಯಾಜಹುಟ್ಟಿಸಿ ಸೋನಿಯಾಳನ್ನು ಮನೆಯಿಂದ ಹೊರಡಿಸಿಬಿಡಬೇಕೆಂದು ಆ ತಾಯಿಯೂ ಮಗಳೂ ನಿಶ್ಚಯಿಸಿಬಿಟ್ಟರು. ಏನಾದರೊಂದು ಅಸಾಧ್ಯವಾದ ಕಾರ್ಯವನ್ನು ಅವಳಿಗೆ ಒಪ್ಪಿಸಿ, ಮತ್ತೆ ಮನೆಗೆ ಬಾರದಂತೆ ಅವಳನ್ನು ಅಡವಿಯೊಳಗೆ ಸಿಕ್ಕಿಸಿ ಹಾಕಬೇಕೆಂದು ತಂತ್ರ ಹುಡುಕಿದರು.

ಅದು ಡಿಸೆಂಬರ್ ತಿಂಗಳು. ಚಳಿಕಾಲ. ರಷ್ಯಾದೇಶದಲ್ಲಿ ಶೀತಕಾಲವೆಂದರೆ ನೆಲವೆಲ್ಲಾ ಮಂಜಿನಿಂದ ಮುಚ್ಚಿಹೋಗುತ್ತಿತ್ತು. ಯಾವುದೊಂದು ಮೊಳಕೆಯೂ ಹೊರಡುತ್ತಿದ್ದಿಲ್ಲ.

ಮಲತಾಯಿ ಪ್ರೀತಿಯನ್ನು ನಟಿಸುತ್ತ ಸೋನಿಯಾಳನ್ನು ಕರೆದು, "ಮುದ್ದುಮಗಳೆ, ಒಂದು ಸಣ್ಣಕೆಲಸ ನೀನು ಮಾಡಬೇಕು. ಒಂದು ಔಷಧಕ್ಕೆ ಗುಡ್ಡದಲ್ಲಿ ಬೆಳೆಯುವ ಹೂಗಳು ಬೇಕಾಗಿವೆ. ನೀನು ಹೇಗಾದರೂ ಮಾಡಿ ಆ ಹೂಗಳನ್ನು ತರಬೇಕು. ಬೇಗನೇ ಹೊರಡು" ಎಂದು ಅವಸರಪಡಿಸಿದಳು.

ಸೋನಿಯಾ ಸಂತೋಷವಾಗಿ ಹೊರಟಳು, "ಪೀಡೆ ತೊಲಗಿತು. ಇನ್ನು ಅವಳು

ಎ. ವಿ. ಸ್ನೈಯದ್ - ಬೊಂಬಾಯಿ



ಮನೆಗೆ ಹಿಂದಿರುಗಿ ಬರುವದು ಸುಳ್ಳು" ಎಂದು ಸಂತೋಷಪಡುತ್ತಿದ್ದರು ತಾಯಿಯೂ ಮಗಳೂ.

ಸೋನಿಯಾಳು ಹೋಗಿ ಹೋಗಿ, ಅಡವಿಗಳನ್ನೆಲ್ಲಾ ದಾಟಿದಾಟಿ, ಕೆಲವು ದಿನಗಳ ಮೇಲೆ ಒಂದು ಬೆಟ್ಟವನ್ನು ಸೇರಿದಳು. ಅದು ಸಂಪೂರ್ಣ ಮಂಜಿನಿಂದ ಮುಳುಗಿಹೋಗಿತ್ತು. ದಾರಿಯೇ ಕಾಣುತ್ತಿದ್ದಿಲ್ಲ.

ನಿಂತು ನೋಡಿದಳು. ಕೊಂಚ ಎತ್ತರದಲ್ಲಿ ಮಿನುಕು ಮಿನುಕೆಂದು ಒಂದು ಬೆಳಕು ಕಾಣತೊಡಗಿತು. ಆ ಬೆಳಕನ್ನು ಗುರುತಾಗಿಟ್ಟುಕೊಂಡು ಅದರಕಡೆಗೇ ಸಾಗಿದಳು.

ಅದೊಂದು ಚಳಿಕಾಯಿಸಿಕೊಳ್ಳುವ ಅಗ್ಗಿಷ್ಟಿಕೆ. ಅದರಸುತ್ತೂ ಕೆಲವು ಗಂಡುಸರು ಕುಳಿತುಕೊಂಡು ಚಳಿಕಾಯಿಸಿಕೊಳ್ಳುತ್ತಿದ್ದರು. ಸೋನಿಯಾ ಧೈರ್ಯದಿಂದ ಅಗ್ಗಿಷ್ಟಿಕೆಯಬಳಿಗೆ ಹೋಗಿ, ಅಲ್ಲಿ ಕುಳಿತುಕೊಂಡವರನ್ನು ನಮಸ್ಕರಿಸಿದಳು.

ಅಲ್ಲಿ ಹನ್ನೊಂದುಮಂದಿ ಕುಳಿತಿದ್ದರು. ಪಕ್ಕದಲ್ಲಿ ಎತ್ತರವಾದೊಂದು ಸಿಂಹಾಸನದ ಮೇಲೆ, ಒಬ್ಬ ಮುದುಕರಾಜನು ತಲೆಯ ಮೇಲೆ ಕಿರೀಟವನ್ನೂ, ಕೈಯಲ್ಲಿ ರಾಜದಂಡವನ್ನೂ ಧರಿಸಿಕೊಂಡು ಕುಳಿತಿದ್ದನು. ಸೋನಿಯಾ ಮಾಡಿದ ನಮಸ್ಕಾರವನ್ನು ಅವನೇ ಸ್ವೀಕರಿಸಿಕೊಂಡನು.

ಕುಳಿತುಕೊಂಡಿದ್ದ ಹನ್ನೊದು ಮಂದಿಗಳಲ್ಲಿ ಒಬ್ಬನು ಅವಳನ್ನು ಕುರಿತು "ಮಗಳೆ, ನೀನು ಯಾರಮ್ಮ? ಮಾನವರು ಬರಲಾರದ ಈ ಸ್ಥಳಕ್ಕೆ ಈ ಅಪರರಾತ್ರಿಯಲ್ಲಿ, ಕೆಲಸವಿರುವವಳಂತೆ ನೀನೇಕೆಬಂದಿ? ಇಲ್ಲಿ ನಿನಗೆ ಏನು ಕೆಲಸ?" ಎಂದು ಆಶ್ಚರ್ಯದಿಂದ ಕೇಳಿದನು. ಅವಳೇನೋ ಹೇಳಬೇಕೆಂದಿರುವಾಗ ಪುನಃ ಅವನೆಂದ: "ನಾವು ತಿಂಗಳುಗಳನ್ನು ಪಾಲಿಸುವ ರಾಜರು. ಜನವರಿ, ಫಿಬ್ರವರಿ, ಮೊದಲಾದುವು ನಮ್ಮ ಹೆಸರು. ವರ್ಷಕ್ಕಿರುವ ಹನ್ನೆರಡು ತಿಂಗಳುಗಳಲ್ಲಿ ಒಂದೊಂದಕ್ಕೆ ಒಬ್ಬೊಬ್ಬರು ಅಧಿಪತಿಯಾಗಿರುತ್ತೇವೆ- ಈಗ ಆ ಸಿಂಹಾಸನದಮೇಲೆ ಕುಳಿತಿರುವವರು ಡಿಸೆಂಬರ್ ಮಹಾರಾಜರು" ಎಂದು ಅವಳಿಗೆ ವಿಶದೀಕರಿಸಿದನು.

ಸೋನಿಯಾಳು ಆ ಡಿಸೆಂಬರ್ ಮಹಾರಾಜನನ್ನು ಚೆನ್ನಾಗಿ ನೋಡಿದಳು. ಆ ಅಗ್ಗಿ

ಷ್ಟಿಕೆಯ ಬೆಳಕಿನಕಾಂತಿಗೆ ಬಂಗಾರದ ಬೊಂಬೆಯಂತೆ ನಿಂತಿರುವ ಆ ಬಾಲಿಕೆಯನ್ನು ಡಿಸೆಂಬರ್ ರಾಜನೂ, ಚೆನ್ನಾಗಿ ನೋಡಿದನು. ಅವಳಮುಖವು ಕಿರುನಗೆಯಿಂದ ಕೂಡಿದ್ದರೂ ಮುಗ್ಧತೆಯೂ ದೈನ್ಯತೆಯೂ ಸೇರಿಕೊಂಡಿರುವುದನ್ನು ಅವನು ಗ್ರಹಿಸಿದನು.

ಅವಳ ಕರುಣ ಕತೆಯನ್ನೆಲ್ಲಾ ಡಿಸೆಂಬರ್ ರಾಜನು ತಿಳಿದುಕೊಂಡನು. ಬಳಿಕ ಅವಳನ್ನು ಸಮಾಧಾನ ಪಡಿಸುತ್ತ ಸಿಂಹಾಸನವಿಳಿದು ಬಂದು, 'ಜೂನ್' ರಾಜನನ್ನು ಸಿಂಹಾಸನವೇರುವಂತೆ ಹೇಳಿದನು.

ಜೂನ್‌ರಾಜನು ಗದ್ದುಗೆಯನ್ನೇರಿ ಒಂದು ಬಾರಿ ಆಜ್ಞಾಪೂರ್ವಕವಾಗಿ ದಂಡವನ್ನು ಬೀಸಿದನು. ಆ ಕ್ಷಣವೇ ಆ ಬೆಟ್ಟದಮೇಲಿನ ಮಂಜು ಕರಗಿ ಮಾಯವಾಗಿಹೋಯಿತು. ನೋಡ ನೋಡುತ್ತಿರಲು ನೆಲವೆಲ್ಲಾ ಹಚ್ಚ ಹಸುರುಗಳಿಂದ ಕಣ್ಣಿಗೆ ಹಬ್ಬವಾಗಿ ಕಂಗೊಳಿಸಿತು. ಗಿಡಬಳ್ಳಿಗಳು ಮೊಳೆತುವು. ಚಿಗುರುಗಳು ಕಳಕಳಿಸಿದುವು. ಹೂಗಳರಳಿದುವು. ಹಣ್ಣು ಕಾಯಿಗಳಿಂದ ಮರಗಳು ತುಂಬಿ ಹೋದುವು.

ರಾಜನ ಅನುಮತಿಯನ್ನು ಪಡೆದು ಸೋನಿಯಾ ಅಪರಿಮಿತವಾದ ಸಂತೋಷದಿಂದ, ತನ್ನ ಉಡಿ, ಮಡಿ, ಹಿಡಿಗಳ ತುಂಬ ಹೂವುಗಳನ್ನು ಕೊಯ್ದುಕೊಂಡಳು. ಹೂವುಗಳನ್ನು ಸೃಷ್ಟಿಮಾಡಿ ಕೊಟ್ಟಿದ್ದುಮಾತ್ರವಲ್ಲದೆ, ಮನೆಗೆ ಹೋಗಿ ಮುಟ್ಟುವವರೆಗೆ ಅವು ಬಾಡಿಹೋಗ




ದಂತೆಯೂ ರಾಜನು ವರವನ್ನು ಕೊಟ್ಟನು. ಹೀಗೆ ಸೋನಿಯಾಳ ಕೋರಿಕೆಯನ್ನು ತೀರಿಸಿ ಜೂನ್‌ರಾಜನು ಗದ್ದುಗೆಯಿಂದ ಇಳಿದು ಅಗ್ಗಿಷ್ಟಿಕೆಯಬಳಿಗೆ ಬಂದನು.

ಒಡನೆಯೇ ಡಿಸೆಂಬರ್ ಮಹಾರಾಜನು ಯಥಾಪ್ರಕಾರವಾಗಿ ಸಿಂಹಾಸನವೇರಿದನು. ಕೂಡಲೇ ಮೊಳೆತ ಮೊಳಕೆಗಳು, ಹೂ, ಚಿಗುರು, ಹಣ್ಣು, ಕಾಯಿ ಮೊದಲಾದುವೆಲ್ಲಾ ಮಾಯವಾಗಿ, ಎಲ್ಲಾ ಸ್ಥಳವನ್ನೂ ಮೊದಲಿನಂತೆಯೇ ಮಂಜುಬಂದು ಕವಿದುಕೊಂಡಿತು.

ಆ ತಿಂಗಳ ದೊರೆಗಳಿಗೆಲ್ಲಾ ಸೋನಿಯಾ ಕೃತಜ್ಞತೆಹೇಳಿ ಅಲ್ಲಿಂದಹೊರಟಳು. ನೇರಾಗಿ ಮನೆಗೆಬಂದು ಸೇರಿದಳು. ಅವಳನ್ನುಕಂಡು ತಾಯಿಗೂ ಮಗಳಿಗೂ ಆಶ್ಚರ್ಯಾಶ್ಚರ್ಯ!

ಅವಳು ಬಹಳ ಅಸಾಧ್ಯವಾದ ಕಾರ್ಯ

ವನ್ನು ಸಾಧಿಸಿಕೊಂಡು ಬಂದುದನ್ನು ನೋಡಿ ಅವರಿಗೆ ಅಸೂಯೆಯುಂಟಾಯಿತು.

"ಈ ಹೂಗಳನ್ನು ಎಲ್ಲಿಂದ ತಂದಿ?" ಎಂದು ಅವರು ಗದರಿಸಿ ಕೇಳಿದರು. ಸೋನಿಯಾ ಏನೂ ಮುಚ್ಚುಮರೆಯಿಲ್ಲದೆ, ಎಲ್ಲ ವೃತ್ತಾಂತವನ್ನೂ ಹೂಸುರಿದಹಾಗೆ ಹೇಳಿಬಿಟ್ಟಳು.

ಅಪರೂಪವಾಗಿರುವ ಈ ಬಗೆಯ ಅಕಾಲದ ಹೂವುಗಳನ್ನು ತಾನೂ ತರುವೆನೆಂದು ನಟಾಷಾ ಹೊರಟಳು. ಬಹಳ ಶ್ರಮಬಟ್ಟು ಆ ಬೆಟ್ಟಪ್ರದೇಶಕ್ಕೆ ಮುಟ್ಟಿದಳು. ಇವಳಿಗೆ ಕೂಡಾ ಅಲ್ಲಿ ಅಗ್ನಿಷ್ಟಿಯ ಬೆಳಕೂ, ಅದರ ಸುತ್ತೂ ಕುಳಿತಿರುವ ರಾಜರೂ ಕಾಣಿಸಿದರು.

ಅವರಲ್ಲೊಬ್ಬನು ಅವಳನ್ನು ಮಾತಾಡಿಸಿದನು. ಅದಕ್ಕೆ ಅವಳು "ಹೋಗಯ್ಯ ಮರ್ಯಾದೆಯಿಲ್ಲದವನೆ! ನನ್ನಗೊಡವೆ ನಿನಗೇಕೆ?" ಎಂದು ತಾತ್ಸಾರಮಾಡಿ ಮುಂದೆ ಹೆಜ್ಜೆ ಇಟ್ಟಳು.

ಅಷ್ಟರಲ್ಲಿ ರಾಜನು ದಂಡವನ್ನು ಬೀಸಿದನು. ಎಲ್ಲಿಂದಲೋ ದಭದಭನೆ ಹಿಮದ ಗಟ್ಟಿಗಳು ಅವಳಮೇಲೆ ಬಿದ್ದುವು. ಅವಳು ಹಿಮದೊಳಗೆ ಮುಳುಗಿಹೋದಳು.

ಅವಳತಾಯಿ, ಎಷ್ಟುದಿನಗಳಾದರೂ ಮಗಳು ಬಾರದ್ದು ನೋಡಿ, ತಾನೇ ಅವಳನ್ನು ಹುಡುಕಿಕೊಂಡು ಹೊರಟಳು.

ಅವಳೂ ಶ್ರಮಪಟ್ಟು ಆ ಬೆಟ್ಟವನ್ನು ಸೇರಿದಳು. ಆ ರಾಜರುಮಾಡಿದ ಕುಶಲಪ್ರಶ್ನೆಗೆ ಇವಳುಕೂಡಾ ವಿಕಟವಾಗಿ ಉತ್ತರ ಹೇಳಿದಳು. ಕೂಡಲೇ ಮಗಳಿಗೆಬಂದ ಗತಿಯೇ ಅವಳಿಗೂ ಒದಗಿತು. ತಾಯಿಯೂ ಮಗಳೂ ಮಂಜಿನೊಳಗೆ ಕಾಣದೆಹೋದರು.

ತಾಯಿಯೂ ತಂಗಿಯೂ ತಿರುಗಿ ಬಾರದ್ದು ನೋಡಿ, ಸೋನಿಯಾ ಅವರನ್ನು ಹುಡುಕುತ್ತಾ, ಆ ಬೆಟ್ಟದಮೇಲಕ್ಕೆ ಬಂದಳು. ತಿಂಗಳರಾಜರನ್ನು ಕಂಡಳು. ಅವಳಿಗೆ ಮೊದಲೇ ಒಲಿದಿದ್ದ ಆ ತಿಂಗಳರಾಜರು, ಅವಳ ಬೇಡಿಕೆಯನ್ನು ಮನ್ನಿಸಿ, ತಾಯಿಯನ್ನೂ ತಂಗಿಯನ್ನೂ ಮಂಜಿನೊಳಗಿನಿಂದ ಎಬ್ಬಿಸಿಕೊಟ್ಟರು. ಅವರಿಬ್ಬರೂ ಸೋನಿಯಾಳಮೇಲೆ ಅತ್ಯಂತ ಮಮತೆಯುಳ್ಳವರಾದರು.

ತಿಂಗಳರಾಜರು ಸೋನಿಯಾಳ ಗುಣಗಳಿಗೆ ಮೆಚ್ಚಿ, ಸೃಷ್ಟಿಸಿಕೊಟ್ಟ ಆ ಹೂ "ಡಿಸೆಂಬರ್ ಹೂ" ಎಂದು ಈಗಲೂ ಶಾಶ್ವತವಾಗಿದೆ.






## 8

[ದೇವಸಿಂಹನ ಸುಳಿವಿಗಾಗಿ ಶಕ್ತಿಸಿಂಹನು ಹೇಗೋ ಅಪೂರ್ವಭವನವನ್ನು ಮುಟ್ಟಿದ್ದೂ, ಆಕಸ್ಮಿಕವಾಗಿ ಆ ಭವನವು ಮಾಯವಾಗಿ, ಅವನ ಪರಿವಾರವೆಲ್ಲಾ ಪಕ್ಷಿಗಳಾಗಿ ಹಾರಿ ಹೋದದ್ದೂ, ಕಡೆಗೆ ಅವನು ಧೈರ್ಯವನ್ನು ಬಿಡದೆ ಪರ್ವತಶ್ರೇಣಿಯ ಕೊನೆಯಲ್ಲಿ ದಾರಿಕಾಣದೆ ನಿಂತದ್ದೂ ಕಳೆದ ಸಂಚಿಕೆಯಲ್ಲಿ ನೀವು ಓದಿದ್ದೀರಲ್ಲವೆ? ಆ ಮೇಲೆ—]

ಏನಾದರೂ ಸರಿ, ಆಚೆಯ ದಡವನ್ನು ಸೇರಿ, ಅಲ್ಲಿಕಾಣುವ ಆ ದೇವಾಲಯವೇನೋ ತಿಳಿದೇ ತೀರಬೇಕೆಂದು ಹಟಹಿಡಿದ ಶಕ್ತಿಸಿಂಹನು, ಮತ್ತೆ ಆಲೋಚನೆಯಲ್ಲಿ ಬಿದ್ದನು. "ಸುಮ್ಮ ಸುಮ್ಮನೆ ಅವಸರಪಟ್ಟು ಈ ಪ್ರಯತ್ನದಲ್ಲಿ ನಾನು ಪ್ರಾಣಬಿಟ್ಟುಬಿಟ್ಟರೆ ಇನ್ನೇನಿದೆ? ಆದ್ದರಿಂದ ಕೊಂಚದಿನ ತಡವಾದರೂ, ಇನ್ನೊಂದು ಸುಲಭವಾದ ಮಾರ್ಗದಿಂದ ಅಲ್ಲಿಗೆ ಸೇರುವುದು ಒಳ್ಳೆಯದು" ಎಂದು ಕೊಂಡನು. ಹೀಗೆ ನಿಶ್ಚಯಿಸಿಕೊಂಡು ಶಕ್ತಿ ಸಿಂಹನು ಹಿಂದಿರುಗಿ, ತಾನು ಏರಿಬಂದ ಪರ್ವತಶ್ರೇಣಿಗಳನ್ನೆಲ್ಲಾ ದಾಟಿ ಕೆಳಕ್ಕೆ ಬಂದನು. ಅಲ್ಲಿ ನೋಡಿದರೆ ಅವನ ಕುದುರೆ ಎಲ್ಲಿದೆ? ಅವನು ಇಲ್ಲಿಗೆ ಏರಿಬಂದಾಗ ತನ್ನ ಕುದುರೆಯನ್ನು ಕೆಳಗೇ ಬಿಟ್ಟಿದ್ದನು. ಅದು ಎಲ್ಲಿಗೆ ಹೋಯಿತೋ ಏನೋ, ಈಗ ಅಲ್ಲಿ ಇರಲೇ ಇಲ್ಲ. ಏನು ಮಾಡುವುದೆಂದು ತೋರದೆ ಶಕ್ತಿಸಿಂಹನು ಕಾಲುನಡಿಗೆಯಿಂದಲೇ ಹೊರಟನು.

ಇನ್ನೀಗ ದೇವಸಿಂಹನ ಸಂಗತಿಯನ್ನು ನೋಡೋಣ:

ದೇವಸಿಂಹನು ತಿರುಗಿ ತಿರುಗಿ ತನ್ನ ಭವನವನ್ನು ಸೇರುವಹೊತ್ತಿಗೆ ಭವನವು ಮಾಯವಾಗಿ ಹೋಗಿತ್ತು. ಕೆಳಗೆಮಾತ್ರ



ಹೋದ ವಿಮಾನದ ಕಡೆಗೇ ನೋಡುತ್ತಾ ಅವರು ನಿಂತೇಬಿಟ್ಟರು.

ದೇವಸಿಂಹನ ವಿಮಾನವು ಹೋಗಿ ಹೋಗಿ, ಒಂದು ಎತ್ತರವಾದ ಪರ್ವತದಮೇಲಿರುವ ಒಂದು ದೇವಾಲಯದ ಮುಂದೆ ನಿಂತಿತು. ಈ ಮೊದಲು ಶಕ್ತಿಸಿಂಹನಕಣ್ಣಿಗೆಬಿದ್ದ ದೇವಾಲಯವೇ ಅದು!

ವಿಮಾನವು ಅಲ್ಲಿ ನಿಂತುದೇತಡ, ಆ ಮಹಿಮೆಯ ಮುದುಕಿ ದೇವಸಿಂಹನಮುಂದೆ ಪ್ರತ್ಯಕ್ಷಳಾಗಿಬಿಟ್ಟಳು. ಅವಳನ್ನು ನೋಡಿ ದೇವಸಿಂಹನ ಆಶ್ಚರ್ಯಕ್ಕೆ ಮೇರೆಯೇ ಇಲ್ಲದೆಹೋಯಿತು. ಈ ವಿಚಿತ್ರವೇನೆಂದು ಅವನು ಆ ವೃದ್ಧೆಯನ್ನು ಕೇಳಬೇಕೆನ್ನುವುದರೊಳಗೆ ಅವಳು ಅವನನ್ನು ಎತ್ತಿಕೊಂಡು ದೇವಾಲಯದೊಳಗೆ ಪ್ರವೇಶಮಾಡಿದಳು.

ಒಳಗೆ ಹೋದಮೇಲೆ ದೇವಸಿಂಹನು ಕೇಳಿದ: "ಅಪೂರ್ವವಾದ ನಮ್ಮ ಭವನವು ಏನಾಯಿತು? ಈ ದೇವಾಲಯವೇನು? ಇಷ್ಟು ದಿನವೂ ನನ್ನ ಮಾತನ್ನು ಮೀರದೇ ಇದ್ದ ವಿಮಾನವು, ಈದಿನ ನನ್ನ ಮಾತನ್ನು ಕೇಳದೆ ಅಡ್ಡತಿರುಗಲಿಕ್ಕೆ ಕಾರಣವೇನು?" ಎಂದು ಪ್ರಶ್ನೆಗಳಮೇಲೆ ಪ್ರಶ್ನೆಮಾಡಿದನು.

ಈ ಎಲ್ಲಾ ಪ್ರಶ್ನೆಗಳಿಗೂ ವೃದ್ಧೆ ಒಂದೇ ಉತ್ತರವಾಗಿ "ನೀನು ಕೇಳಕೂಡದು. ಅಲ್ಲಿಗಿಂತ ಇಲ್ಲಿ ಎಷ್ಟೋ ಸುಖವಾಗಿರಬಹುದು. ಆದರೆ ಕೊಂಚಕಾಲ ನೀನು ವಿಮಾನದಲ್ಲಿ ಹೊರಗೆ ಹೋಗಕೂಡದು. ಆದ್ದರಿಂದ

ಮಂತ್ರಿಯೂ ಆಸ್ಥಾನವೈದ್ಯನೂ ಇದ್ದರು. ಈ ಮಾಯೆ ದೇವಸಿಂಹನಿಗೆ ಅರ್ಥವಾಗಲೇ ಇಲ್ಲ. ಭವನವು ಏನಾಯಿತು? ಕೆಳಗೆ ಹೋಗಿ ಅವರನ್ನು ಮಾತಾಡಿಸಿ ನೋಡೋಣವೆ? ಆಗೇನಾದರೂ ತಿಳಿದೀತೆ? ಅದುಹೊರತು ಬೇರೆ ಯಾವದಾರಿಯೂ ಕಾಣಿಸುವುದಿಲ್ಲ. ಆದ್ದರಿಂದ ಕೆಳಕ್ಕೆ ಹೋಗಬೇಕೆಂದು ನಿಶ್ಚಯಿಸಿದನು. ಆದರೆ ವಿಚಿತ್ರ! ಆ ಮಾಯವಿಮಾನವು ಕೆಳಕ್ಕೆ ಇಳಿಯುವದಕ್ಕೆ ಬದಲಾಗಿ ಮುಂದೆ ಮುಂದೆ ಸಾಗುತ್ತಿತ್ತು.

ಈಬಾರಿ ಹೇಗಾದರೂ ದೇವಸಿಂಹನಿಗೆ ನಂಬಿಗೆ ಹುಟ್ಟಿಸಿ ಅವನನ್ನು ತಮ್ಮೊಂದಿಗೆ ಕರೆದೊಯ್ಯಬೇಕೆಂದು ತುಂಬಾ ಆಶೆಪಟ್ಟಿದ್ದ ಮಂತ್ರಿಗೂ ವೈದ್ಯನಿಗೂ ಬಹಳ ಜೇಸರವಾಯಿತು. ತಮ್ಮನ್ನು ದಾಟಿಕೊಂಡು



ಇಲ್ಲಿಯೇ ಸುಖವಾಗಿ ಕಾಲಹರಣ ಮಾಡಿಕೊಂಡಿರು. ನಾನು ಆಗಾಗ ಬಂದು ನಿನ್ನನ್ನು ನೋಡುತ್ತಾ ಹೋಗುತ್ತಿರುತ್ತೇನೆ" ಎಂದು ಹೇಳಿ ಸುಮ್ಮನಾದಳು.

ದೇವಸಿಂಹನು ನೋಡುತ್ತಿರುವಾಗಲೇ ಆ ವೃದ್ಧೆ ಪಕ್ಕದಲ್ಲಿದ್ದ ವಿಮಾನವನ್ನು ಕೈಯಲ್ಲಿ ಹಿಡಿದು ಮುದ್ದೆಯಾಗಿ ಮಾಡಿದಳು. ವಿಮಾನವು ಮುದುಡಿಹೋಗಿ ಗುಂಡಗಾದೊಂದು ಬಂತಿಯಾಗಿ ಮಾರ್ಪಟ್ಟಿತು. ಆ ಬಂತಿಯನ್ನು ಅವಳು ದೇವಸಿಂಹನ ಕೈಗೆ ಕೊಟ್ಟು "ಇದನ್ನು ಭದ್ರವಾಗಿ ಅಡಗಿಸಿ ಇಟ್ಟುಕೋ" ಎಂದು ಹೇಳಿ ಮಾಯವಾದಳು.

ವೃದ್ಧೆ ಹೋದಮೇಲೆ ದೇವಸಿಂಹನು ಮೆಲ್ಲನೆ ಆ ದೇವಾಲಯವೆಲ್ಲಾ ತಿರುಗಾಡಿ ನೋಡಿದ. ಹೊರಗಿನಿಂದ ನೋಡಿದರೆ ಅದು ದೇವಾಲಯದಂತಿದ್ದರೂ, ಒಳಗೆ ಎಷ್ಟೋ ಚಿತ್ರವಿಚಿತ್ರಗಳಿದ್ದುವು. ಒಂದುಕಡೆ ವಿಧವಿಧವಾದ ಪಕ್ಷಿಗಳು "ಕಿಲಕಿಲ"ವೆನ್ನುತ್ತ ಹಾರುತ್ತಿದ್ದುವು. ಇನ್ನೊಂದುಕಡೆ ಜಿಂಕೆ ಮೊದಲಾದ ಸಾಧು ಜಂತುಗಳಿದ್ದವು. ಇನ್ನೂ ಒಳಗೆ ಹೋದಾಗ ಭಯಂಕರವಾದ ಸರ್ಪಗಳು ಭುಸುಗುಟ್ಟುತ್ತ ಅಲ್ಲಿ ಇಲ್ಲಿ ತಿರುಗಾಡುತ್ತಿದ್ದುವು. ಮತ್ತೊಂದುಕಡೆ "ಗಾಂಡ್ರು ಗಾಂಡ್ರು"ಎಂದು ಗರ್ಜಿಸುತ್ತ ಹುಲಿಗಳೂ ಸಿಂಹಗಳೂ ತಿರುಗಾಡುತ್ತಿದ್ದುವು.

ಇವುಗಳನ್ನು ನೋಡಿ ದೇವಸಿಂಹನು ಭಯಪಡಲೇ ಇಲ್ಲ. ಅವುಗಳನ್ನೆಲ್ಲಾ ಒಂದು






ಆಟದ ವಸ್ತುಗಳಂತೆ ನೋಡಿಕೊಂಡು, ಅವುಗಳಮಧ್ಯೆ ನಿರ್ಭಯವಾಗಿ ತಿರುಗಾಡಿದನು. ಆಶ್ಚರ್ಯವೇನೆಂದರೆ, ಅವುಗಳುಕೂಡಾ ದೇವಸಿಂಹನ ತಂಟೆಗೆ ಹೋಗದೆ ತಮ್ಮ ಪಾಡಿಗೆ ತಾವಿದ್ದವು.

ದೇವಸಿಂಹನು ಈ ವಿಚಿತ್ರಗಳನ್ನು ನೋಡುತ್ತಾ ಹೋಗುತ್ತಿರಲು ಒಂದು ಸಣ್ಣ ಹೂವಿನ ತೋಟವು ತೋರಿತು. ಅದರ ನಡುವೇ ದೇವಸಿಂಹನ ಈಡಿಗೆ ಸರಿಯಾದ ಹುಡುಗನೊಬ್ಬನು ಉಲ್ಲಾಸದಿಂದ ಆಡುತ್ತಿದ್ದನು.

ಈ ಹುಡುಗನನ್ನು ನೋಡಿದಕೂಡಲೇ ದೇವಸಿಂಹನಿಗೆ ಹೊಸ ಹುರುಪು ಬಂತು. ಆ ಹುಡುಗನು ಯಾರೆಂದುಕೂಡಾ ಅವನು ಕೇಳಲಿಲ್ಲ. ಚರಚರನೆ ಅವನಬಳಿಗೆ ಹೋಗಿ "ಆಡೋಣ, ಬರುತ್ತೀಯಾ?" ಎಂದು ಕೇಳಿದನು.

"ಆಡುವಾ. ಆದರೆ ನನ್ನೊಂದಿಗೆ ಸರಿಯಾಗಿ ನೀನು ಓಡಲಾರೆಯಷ್ಟೆ?" ಎಂದು ಆ ಹುಡುಗ ದೇವಸಿಂಹನ ಕಾಲನ್ನು ಕನಿಕರದಿಂದ ನೋಡಿದನು.

ಇಷ್ಟು ದಿವಸ ಆಟಗಳಲ್ಲಿ ತನ್ನ ಕುಂಟುಗಾಲಿನ ಸಂಗತಿಯನ್ನೆ ದೇವಸಿಂಹನು ಮರೆತಿದ್ದನು. ತಾನು ಕುಂಟನೆಂಬ ಯೋಚನೆಯೇ ಅವನಿಗಿರಲಿಲ್ಲ. ಆದರೆ ಈಗ ಈ ಹುಡುಗ ಹಾಗೆ ಹೇಳುತ್ತಲೇ ತನ್ನ ಕಾಲಿನ ಸಂಗತಿ ನೆನಪಿಗೆ ಬಂತು. ಅದರೊಂದಿಗೆ ದುಃಖವೂ ಹೊರಳಿಕೊಂಡು ಬಂತು.

ಇದನ್ನು ನೋಡಿ ಆ ಹುಡುಗ—"ಯಾಕೆ ಅಳುತ್ತಿ? ಪರವಾಯಿಲ್ಲ, ಬಾ, ಆಡೋಣ" ಎಂದು ದೇವಸಿಂಹನನ್ನು ಸಮಾಧಾನಪಡಿಸಿದನು. ಆಗಿನಿಂದ ಆ ಹುಡುಗನೊಂದಿಗೆ ಸೇರಿಕೊಂಡು ದೇವಸಿಂಹನು ಉಲ್ಲಾಸದಿಂದ ಕಾಲಹರಣ ಮಾಡಲಾರಂಭಿಸಿದನು.

ಹೀಗಿರಲು ಒಂದುದಿನ ಆ ವೃದ್ಧೆ ಕೊಟ್ಟಿದ್ದ ಬಂತಿಯೊಂದಿಗೆ ಅವರು ಆಡುತ್ತಿದ್ದಾಗ ಬಂತಿ ರಿವ್ವೆಂದು ಹಾರಿ ದೇವಾಲಯವನ್ನು ದಾಟಿ ದೂರದಲ್ಲಿ ಬಿದ್ದು ಹೋಯಿತು.

ಭದ್ರವಾಗಿ ಅಡಗಿಸಿಟ್ಟುಕೊಳ್ಳಬೇಕೆಂದು ಹೇಳಿ ಆ ವೃದ್ಧೆ ಆ ಬಂತಿಯನ್ನು ಕೊಟ್ಟಿದ್ದಳಷ್ಟೆ? ಅದು ಹೀಗೆ ಹೋದದ್ದು ನೋಡಿ

ದೇವಸಿಂಹನು ಬಹಳ ದುಃಖಿಸಿದನು. ಜತೆ ಹುಡುಗ—"ಹೋದರೆ ಹೋಗಲಿ. ಇಷ್ಟೊಂದಕ್ಕೆ ಹೀಗೆ ದುಃಖಿಸಬೇಕೆ?' ಎಂದು ಸಮಾಧಾನ ಪಡಿಸಲು ನೋಡಿದನು.

ವೃದ್ಧೆ ಹೇಳಿದ ಎಚ್ಚರಿಕೆಯ ಮಾತನ್ನು ಹೇಳಿಬಿಟ್ಟರೆ, ತನ್ನ ಅಜಾಗರೂಕತೆ ಹೊರಗಾಗಿ ಹೋಗುವುದೆಂದು ದೇವಸಿಂಹನಿಗೆ ನಾಚಿಕೆಯಾಯಿತು. ಆದ್ದರಿಂದ ಆ ಬಂತಿಯ ಸಂಗತಿಯನ್ನು ಅಷ್ಟಕ್ಕೇ ಬಿಟ್ಟು, ಎಂದಿನಂತೆ ಆ ಹುಡುಗನ ಜತೆಯಲ್ಲಿ ಆಡುತ್ತಿದ್ದನು.

* * *

ಕೆಲವುದಿನಗಳು ಕಳೆದುಹೋದುವು. ಶಕ್ತಿಸಿಂಹನು ಅತ್ಯಂತ ಕಷ್ಟಪಡುತ್ತ ದೇವಾಲಯದ ಬಳಿಯಲ್ಲಿರುವ ಪಾತಾಳದರಿಯಲ್ಲಿಳಿದು ಬಂದುಬಿಟ್ಟನು. ಆಗ ಹುಡುಗರು ಬಿಸುಟಿದ್ದ ಆ ಬಂತಿ ಕಣ್ಣಿಗೆ ಬಿದ್ದಿತು. ಅದನ್ನು ತೆಗೆದುಕೊಂಡು ತಿರುತಿರುಗಿಸಿ ನೋಡಿದನು. ಅದರಲ್ಲಿ ಏನೂ ವಿಶೇಷ ಕಾಣದಿದ್ದರೂ, ಯಾವುದಕ್ಕಾದರೂ ಉಪಯೋಗವಾದೀತೆಂದುಕೊಂಡು ತನ್ನ ಬಳಿಯಲ್ಲಿ ಭದ್ರವಾಗಿ ಇಟ್ಟುಕೊಂಡನು. ಆಮೇಲೆ ದೇವಾಲಯವಿರುವ ಪರ್ವತವನ್ನು ಏರತೊಡಗಿದನು.

ಸ್ವಲ್ಪಹೊತ್ತಿಗೆಲ್ಲಾ ಶಕ್ತಿಸಿಂಹನು ದೇವಾಲಯದ ಮಹಾದ್ವಾರದ ಬಳಿಗೆ ಬಂದೇಬಿಟ್ಟನು. ಆದರೆ ಬಾಗಿಲು ಹಾಕಿತ್ತು. ತೆರೆಯಲು ಸಾಧ್ಯವೇ ಇರಲಿಲ್ಲ. ಏನೂ ತೋರದೆ




ಬಾಗಿಲು ತಟ್ಟಿದನು. ಉತ್ತರವೇ ಇಲ್ಲ. ಹಾಗೆಯೇ ಕಾದುಕೊಂಡು ಅಲ್ಲಿಯೇ ಕುಳಿತುಬಿಟ್ಟನು.

* * *

ಅತ್ತ, ಮಂತ್ರಿಯೂ ವೈದ್ಯನೂ ಕೆಲವುದಿನ ದೇವಸಿಂಹನ ಬರುವಿಕೆಗಾಗಿ ಎದುರುನೋಡಿಕೊಂಡಿದ್ದರು. ಆದರೆ ಯಾವಸುಳಿವೂ ಕಾಣದೆ ನಿರಾಶೆಹೊಂದಿದರು. ಇನ್ನು ಅಲ್ಲಿದ್ದರೆ ಪ್ರಯೋಜನವಿಲ್ಲವೆಂದು ನಿಶ್ಚಯಿಸಿಕೊಂಡರು.

ಮರುದಿನವೇ ಆ ಸ್ಥಳವನ್ನು ಬಿಟ್ಟು, ದೇವಸಿಂಹನನ್ನು ಹುಡುಕುತ್ತಾ ಹೊರಟರು. ಕೆಲವುದಿನ ಪ್ರಯಾಣಮಾಡಿದಮೇಲೆ ಶಕ್ತಿಸಿಂಹನ ಅಶ್ವಿಕಪರಿವಾರವು ಅವರ ಕಣ್ಣಿಗೆಬಿತ್ತು.

ಆ ಪರಿವಾರದವರಿಗೆ ಮಂತ್ರಿಯಗುರುತು ಹತ್ತಿತು. ಮಂತ್ರಿಯೊಂದಿಗೆ ಆಸ್ಥಾನ



ವೈದ್ಯನೂ ಇರುವದನ್ನು ನೋಡಿ ಅವರೆಲ್ಲ ಚಕಿತರಾದರು.

. ಮಂತ್ರಿ ಬಹಳ ದುಷ್ಟನೆಂದೂ, ಅವನು ಕಣ್ಣಿಗೆಬಿದ್ದರೆ, ಅವನನ್ನು ಪ್ರಾಣದೊಂದಿಗೆ ಬಿಡಬಾರದೆಂದೂ ಹೇಳುತ್ತಾ ಬಂದ ಆ ವೈದ್ಯನು ಮಂತ್ರಿಯೊಂದಿಗೆ ಕೂಡಿಕೊಂಡಿರುವುದೆಂದರೆ ಎಂತಹ ಪಿತೂರಿ! ಈಗೇನು ಮಾಡಬೇಕು? ಅವರ ಮನಸ್ಸಿನಲ್ಲಿ ಬಗೆಬಗೆಯ ಯೋಚನೆಗಳು ಒಂದೇಬಾರಿಗೆ ಬರತೊಡಗಿದುವು. ಆದರೆ ತಡಮಾಡಲು ಅವಕಾಶವೆಲ್ಲಿದೆ?

ಎಲ್ಲರೂ ಒಮ್ಮೆಲೇ ಕತ್ತಿಯನ್ನೆತ್ತಿ ಮಂತ್ರಿಯಮೇಲೆ ಬೀಳಲಿಕ್ಕೆ ಬಂದರು. ವೈದ್ಯನು ಅವರನ್ನು ತಡೆದು,—"ಅವಸರಪಡಬೇಡಿ. ನಮ್ಮ ಮಂತ್ರಿ ನಿರ್ದೋಷಿ. ನಿಜವಾದ ಅಪರಾಧಿಯನ್ನು ಹುಡುಕಬೇಕಾಗಿದೆ. ಅದಕ್ಕಾಗಿಯೇ ನಾವು ಹೀಗೆ ತಿರುಗುತ್ತಿದ್ದೇವೆ" ಎಂದನು.

ಅದಕ್ಕೆ ಆಶ್ವಿಕರು—"ಓಹೊ! ಹಾಗೋ ಸಂಗತಿ? ಸರಿ. ನಾವೀಗ ಮಹಾರಾಜರಿಗಾಗಿಯೇ ಬಂದಿದ್ದೇವೆ. ಶತ್ರುರಾಜನ ಸೈನವು ಬಂದು ನಮ್ಮ ರಾಜ್ಯವನ್ನು ಮುತ್ತಿಗೆಹಾಕಿದೆ. ಪರಿಸ್ಥಿತಿ ಬಹಳ ಅಪಾಯವಾಗಿದೆ. ಪ್ರಭುಗಳು ಎಲ್ಲಿದ್ದಾರೆ?" ಎಂದು ಬಹಳ ಆತುರದಿಂದ ಕೇಳಿದರು.

ಮಂತ್ರಿಯೂ ವೈದ್ಯನೂ ಆಶ್ಚರ್ಯಪಟ್ಟರು. "ಶತ್ರುಗಳು ಮುತ್ತಿರುವರೆ? ನಮ್ಮ ರಕ್ಷಕ ಸೇನೆಯೆಲ್ಲಾ ಏನಾಯಿತು?" ಎಂದು ಗದರಿಸಿ ಕೇಳಿದನು ಮಂತ್ರಿ.

"ಗ್ರಹಾಚಾರ! ನಮ್ಮ ಸೇನೆಯ ಮೂರು ಭಾಗವೆಲ್ಲಾ ನಿಮ್ಮನ್ನು ಹುಡುಕಲಿಕ್ಕಾಗಿ ಓಡಿವೆ. ಮಿಕ್ಕ ಸ್ವಲ್ಪಮಂದಿಯಿಂದ ಏನಾದೀತು?" ಎಂದರು ಆಶ್ವೀಕರು.

"ಸರಿ. ಈಗಲೇ ಹೊರಡೋಣ. ಮುಖ್ಯವಾಗಿ ರಾಜ್ಯವನ್ನು ಕಾಪಾಡಿಕೊಳ್ಳಬೇಕು" ಎಂದನು ಮಂತ್ರಿ ಆವೇಶದಿಂದ.

"ಹಾಗಲ್ಲ. ನೀವು ನಿಮ್ಮ ಪ್ರಯತ್ನದೊಂದಿಗೆ ಇಲ್ಲಿಯೇ ಇರಿ. ನಾನು ಇವರೊಂದಿಗೆ ಹೊರಟು, ರಾಜ್ಯವನ್ನು ಕಾಪಾಡಲು ಪ್ರಯತ್ನಿಸುತ್ತೇನೆ" ಎಂದನು ವೈದ್ಯ.

ಮಂತ್ರಿ "ಸರಿ" ಎಂದನು. ವೈದ್ಯನು ಆಶ್ವಿಕರಹಿಂದೆಯೇ ಹೊರಟನು.

* * *

ಅಲ್ಲಿ ದೇವಾಲಯದಮುಂದೆ ಕುಳಿತಿದ್ದ ಶಕ್ತಿಸಿಂಹನಿಗೆ ಸ್ವಲ್ಪಹೊತ್ತಿಗೆಲ್ಲಾ ತೂಕಡಿಕೆ ಪ್ರಾರಂಭವಾಯಿತು. ಸಣ್ಣ ನಿದ್ದೆಬಂತು. ನಿದ್ದೆಯಲ್ಲಿ ಒಂದು ಕನಸುಬಿತ್ತು :—

ತನ್ನ ರಾಜ್ಯವೆಲ್ಲಾ ಅಲ್ಲಕಲ್ಲೋಲವಾಗಿ ಹೋಗಿದೆ. ಪ್ರಜೆಗಳೆಲ್ಲಾ ಇಷ್ಟಬಂದಹಾಗೆ ತಿರುಗಾಡುತ್ತಿದ್ದರು. ಈ ಸಂಧಿಸಾಧಿಸಿ ಶತ್ರುರಾಜನು ಸೈನ್ಯದೊಂದಿಗೆ ಬಂದು ರಾಜ್ಯವನ್ನು ಮುತ್ತಿಗೆಹಾಕಿದ್ದಾನೆ.

ಶಕ್ತಿಸಿಂಹನು ಗಡಿಬಿಡಿಯಿಂದ ಎಚ್ಚೆತ್ತನು. ನೋಡಿದರೆ ಆ ದೇವಾಲಯದ ಮುಂದೆಯೇ ಇದ್ದಾನೆ! ಎಲ್ಲಾ ಸ್ವಪ್ನವೆಂದು ಗೊತ್ತಾಯಿತು. ಕನಸಿನ ದೃಶ್ಯಗಳನ್ನು ನೆನೆಸಿಕೊಂಡು ಮನಸ್ಸಿನಲ್ಲಿ ತುಂಬಾ ಚಿಂತೆಯುಂಟಾಯಿತು.

ಶಕ್ತಿಸಿಂಹನಿಗೆ ಕನಸಿನಮೇಲೆ ಬಹಳ ನಂಬಿಕೆ. ಕನಸಿನಲ್ಲಿ ಕಂಡಂತೆಯೇ ನಡೆದಿರಬಹುದೆಂದು ಭಯವಾಗುತಿತ್ತು. ಆದ್ದರಿಂದ ಒಮ್ಮೆ ಹೋಗಿ ರಾಜ್ಯದಗತಿ ಏನಾಗಿದೆಯೋ ನೋಡಿಬಾರದಿದ್ದರೆ ಮನಸ್ಸು ನೆಮ್ಮದಿಗೆ ಬಾರದಸ್ಥಿತಿಯಾಯಿತು. ಅಲ್ಲಿಂದೆದ್ದು ಹೊರಟನು. ಎರಡುದಿನಗಳಿಗೆ ಆ ಗುಡ್ಡವನ್ನಿಳಿದು ಕೆಳಗೆ ಬಂದನು.

ವಿಧಿವಿರಾಮವಿಲ್ಲದೆ ಶ್ರಮಪಟ್ಟು ಶಕ್ತಿಸಿಂಹನು ಬಹಳ ಬಳಲಿಹೋದನು. ಇಷ್ಟು ದಿನ ಕುದುರೆ ಇದ್ದುದರಿಂದ ಎಷ್ಟು ದೂರ ಪ್ರಯಾಣಮಾಡಿದರೂ ಕಷ್ಟವೆನಿಸಲಿಲ್ಲ. ಈಗ ಕಾಲೆತ್ತಿ ನಡೆಯುವುದೇ ಅಸಾಧ್ಯವಾಗಿ



ತೋರಿತು. ಬಳಲಿಬೆಂಡಾಗಿ ಒಂದು ಮರದ ಬುಡದಲ್ಲಿ ವಿಶ್ರಮಿಸುತ್ತಲೇ ನಿದ್ದೆ ಬಂದುಬಿಟ್ಟಿತು. ಆ ನಿದ್ದೆಯಲ್ಲಿ ಪುನಃ ಕನಸು ಕಂಡನು. ಮೊದಲಿನ ಕನಸು ಪೂರ್ತಿಯಾಗದ್ದರಿಂದ ಪುನಃ ಕನಸು ಕಂಡನೋ ಏನೋ! ಈಗಿನ ಕನಸಿನ ವಿಶೇಷವೇನಂದರೆ, ತಾನು ಬೆಟ್ಟದ ಮೇಲಿನ ದೇವಾಲಯವನ್ನು ಸೇರಿಕೊಂಡಂತೆಯೂ ದೇವಾಲಯದ ಬಾಗಿಲು ತೆರೆದೇ ಇರುವಂತೆಯೂ, ಒಳಗೆ ಪ್ರವೇಶಿಸುತ್ತಿದ್ದಾಗ ಇಬ್ಬರು ಸಣ್ಣ ಹುಡುಗರು ಆಡುತ್ತಾ ಇದ್ದಂತೆಯೂ ತೋರಿತು. ಆಡುತ್ತಿದ್ದ ಆ ಹುಡುಗರಲ್ಲಿ ಒಬ್ಬನು ತನ್ನ ಸೋದರಳಿಯನಾದಂತೆ ಸ್ಪಷ್ಟವಾಗಿ ತೋರಿತು.

ಯಾವಾಗ ದೇವಸಿಂಹನು ತೋರಿಬಂದನೋ ಆಗಲೇ ಶಕ್ತಿಸಿಂಹನು "ಏನಿದು? ನನ್ನ

ದೇವಸಿಂಹ!" ಎನ್ನುತ್ತಾ ಅವನನ್ನು ಕೈನೀಡಿ ಹಿಡಿಯಲಿಕ್ಕೆ ಹೋಗುವಾಗಲೇ ಎಚ್ಚರಿಕೆಯಾಗಿಬಿಟ್ಟಿತು. ಈ ಕನಸಿನಿಂದ ಶಕ್ತಿಸಿಂಹನ ಮನೋವೇದನೆ ಮತ್ತಷ್ಟು ಹೆಚ್ಚಾಯಿತು.

"ಎಂತಹ ಕನಸಿದು! ಏನು ವಿಪರೀತ!! ನನ್ನ ರಾಜ್ಯವು ಶತ್ರುವಿನ ಕೈಗೆ ಸಿಕ್ಕಿಬಿಡುವುದೇ? ನಾನು ಕೈಯಾರೆ ಕೊಂದುಹಾಕಿದ ದೇವಸಿಂಹನು ಇನ್ನೂ ಬದುಕಿದ್ದಾನೆಯೆ?" ಎಂದುಕೊಳ್ಳುತ್ತಾ, ಒಂದೆಡೆ ವೈರಾಗ್ಯದಿಂದಲೂ, ಇನ್ನೊಂದೆಡೆ ಆಶೆಯಿಂದಲೂ, ಪುನಃ ಆ ಬೆಟ್ಟದಮೇಲಕ್ಕೇ ಹೊರಟನು.

ಕೆಲವುದಿನಗಳಿಗೆಲ್ಲಾ ಗುಡ್ಡದ ಮೇಲೆ ಸೇರಿ, ದೇವಾಲಯದಕಡೆಗೆ ನಡೆಯುತ್ತಿದ್ದಾಗ ಬಾಗಿಲು ತೆರೆದಶಬ್ದವು ಕೇಳಿತು. ಶಕ್ತಿಸಿಂಹನಿಗೆ ಉತ್ಸಾಹವುಬಂತು. ಅತ್ತ ನೋಡಿದಾಗ ಒಬ್ಬ ಸಣ್ಣ ಹುಡುಗ ದೇವಾಲಯದೊಳಗಿಂದ ಹೊರಗೆಬಂದು ಚರಚರನೆ ನಡೆದುಹೋದನು.

ಆ ಹುಡುಗ ಹೊರಗೆ ಹೊರಟಕೂಡಲೇ ದೇವಾಲಯದ ಬಾಗಿಲು ಎಂದಿನಂತೆ ಮುಚ್ಚಿಹೋಯಿತು. ಶಕ್ತಿಸಿಂಹನು ಆ ಹುಡುಗನ ಬೆನ್ನಟ್ಟಿಕೊಂಡು ಹೋಗಲಾರಂಭಿಸಿದನು.

ಸ್ವಲ್ಪದೂರ ಹೋದಮೇಲೆ ಆ ಹುಡುಗ ಏನನ್ನೋ ಹುಡುಕುತ್ತಿರುವಂತೆ ತೋರಿತು. ಶಕ್ತಿಸಿಂಹ ಅವನ ಬಳಿಗೆಹೋಗಿ "ಹುಡುಗಾ, ಏನು ಹುಡುಕುತ್ತಿದ್ದಿ?" ಎಂದು ಕೇಳಿದನು.

"ನಾವು ಆಡುವ ಬಂತಿ ಇಲ್ಲಿ ಎಲ್ಲಿಯೋ ಬಿದ್ದುಹೋಗಿದೆ" ಎಂದನು ಆ ಹುಡುಗ.

ಶಕ್ತಿಸಿಂಹನು ತನ್ನಲ್ಲಿರುವ ಬಂತಿಯನ್ನು ತೋರಿಸುತ್ತಾ "ಇದೇ ಏನು?" ಎಂದ.

"ಆ! ಇದೇ!! ಇದೆ!!! ಇದಕ್ಕಾಗಿಯೇ ನನ್ನ ಮಿತ್ರ ರಾಗಾಲಾಪನೆ ಮಾಡುತ್ತಿದ್ದಾನೆ" ಎಂದನು ಆ ಹುಡುಗ.

"ಪಾಪ, ನಿನ್ನ ಮಿತ್ರನಿಗೆ ಕೊಡೋಣ ನಡೆ" ಎನ್ನುತ್ತಾ ಶಕ್ತಿಸಿಂಹನು ಆ ಹುಡುಗನನ್ನು ಆನಂದದಿಂದ ಎತ್ತಿಕೊಂಡು, ದೇವಾಲಯದ ಕಡೆಗೆ ಹೊರಟನು.

---

[ಶಕ್ತಿಸಿಂಹನಿಗೆ ಸಿಕ್ಕದೆ ದೇವಸಿಂಹನು ತಪ್ಪಿಸಿಕೊಳ್ಳುತ್ತಾನೆಯೆ? ಪುನಃ ಒಬ್ಬಂಟಿಗನಾದ ಆ ಮಂತ್ರಿಯ ಗತಿ ಏನಾಗುತ್ತದೆ? ಕಡೆಗೂ ಶಕ್ತಿಸಿಂಹನ ರಾಜ್ಯ ಶತ್ರುರಾಜರ ವಶವಾಗಿ ಹೋಗುತ್ತದೆಯೆ?— ಇವುಗಳೂ ಇನ್ನೂ ಕೆಲವು ವಿಚಿತ್ರ ಸಂಘಟನೆಗಳೂ ಬರುವ ತಿಂಗಳು.]





# ನೆತ್ತಿಯ ಮೇಲೆ ಕತ್ತಿ

ನಮ್ಮ ದೇಶದಲ್ಲಿ ಮೊಗಲಾಯ ಸಾಮ್ರಾಜ್ಯವನ್ನು ಸ್ಥಾಪಿಸಿದ ಮಹಮ್ಮದೀಯ ಚಕ್ರವರ್ತಿಯ ಹೆಸರು ಬಾಬರ್. ಬಾಬರನು ಸಿಂಹದಂತೆ ಬಹಳ ಧೈರ್ಯಶಾಲಿಯಾಗಿದ್ದ.

ಆದರೆ 'ಮನೆ ಸಾರಿಸಿದಕೂಡಲೇ ಹಬ್ಬವಾಗುವುದೆ?' ಎಂಬಂತೆ ಸಾಮ್ರಾಜ್ಯ ಸ್ಥಾಪನೆ ಮಾಡಿದಮಾತ್ರಕ್ಕೆ ಏನೂ ಸಾಧಿಸಿದಂತಾಗುವುದಿಲ್ಲ. ಸ್ಥಾಪಿಸಿದ ಅದನ್ನು ಸಾವಿರ ಕಣ್ಣುಗಳಿಂದ ಕಾಪಾಡಬೇಕು. ಪ್ರಜೆಗಳಿಗೆ ಸುಖವುಂಟಾಗಿಸಬೇಕು. ಚಕ್ರವರ್ತಿಯಾದವನಿಗೆ ಸಾಮಾನ್ಯವಾಗಿ ಮಿತ್ರರಿಗಿಂತಲೂ ಶತ್ರುಗಳೇ ಹೆಚ್ಚಾಗಿರುತ್ತಾರೆ. ಆ ಶತ್ರುಗಳಿಂದ ದೇಶಕ್ಕೆ ಕೇಡುಂಟಾಗದಂತೆ ನೋಡಿಕೊಂಡಿರಬೇಕು. ಬಾಬರನು ಅತ್ಯಂತ ಎದೆಗಾರನಾದುದರಿಂದ ಅಕ್ಕಪಕ್ಕಗಳಲ್ಲಿ ಪ್ರಬಲರಾದ ಶತ್ರುಗಳಿದ್ದರೂ, ಅವನು ಕೊಂಚವೂ ಭಯಪಡದೆ ರಾಜ್ಯವನ್ನು ಪಾಲಿಸುತ್ತಿದ್ದನು.

ಅವನ ಅನುಚರರಲ್ಲಿ ಅಲೀಖಾನ್ ಎಂಬವನೊಬ್ಬನಿದ್ದ. ಅವನು ಪ್ರತಿನಿತ್ಯವೂ ಚಕ್ರವರ್ತಿಯ ಭೋಜನಶಾಲೆಯಲ್ಲಿ ಪುಷ್ಕಳವಾಗಿ ಭೋಜನಮಾಡಿ, ಚಕ್ರವರ್ತಿಯನ್ನು ಸಂತೋಷಪಡಿಸಲಿಕ್ಕಾಗಿ ಏನೇನೋ ಹೇಳುತ್ತಿದ್ದ.

ಒಂದುದಿನ ಅಲೀಖಾನನು:—"ಪ್ರಭು, ತಾವೆಂದರೆ ಅಲ್ಲಾನಿಗೆ ಎಷ್ಟೋ ಅಭಿಮಾನ. ಆದ್ದರಿಂದಲೇ ಅವನು ತಮಗೆ ಸರ್ವಸೌಖ್ಯವೂ ಸಿಕ್ಕುವಂತೆ, ಈ ಮಹಾ ಸಾಮ್ರಾಜ್ಯವನ್ನು ಪ್ರಸಾದಿಸಿದ್ದಾನೆ" ಎಂದನು. ಅದಕ್ಕೆ ಚಕ್ರವರ್ತಿ—"ಅಲೀಖಾನ್, ಸಾಮ್ರಾಜ್ಯವಿದ್ದರೆ ಸಕಲಸೌಖ್ಯಗಳೂ ಬರುತ್ತವೆಂದು ನಿನ್ನ ಉದ್ದೇಶವೊ?" ಎಂದು ಕೇಳಿದನು.

ಅದಕ್ಕೆ ಅಲೀಖಾನ್:—"ಸಂದೇಹವೇನು ಪ್ರಭು? ತಮಗಿಂತ ಹೆಚ್ಚು ಸುಖಪಡುವವನು ಈ ದೇಶದಲ್ಲಿಯೇ ಅಲ್ಲ, ಈ ವಿಶಾಲಪ್ರಪಂಚದಲ್ಲಿಕೂಡಾ ಎಲ್ಲಿಯೂ ಇಲ್ಲ" ಎಂದುಬಿಟ್ಟನು.

ಚಕ್ರವರ್ತಿ ತಲೆದೂಗುತ್ತಾ "ಹಾಗಾದರೆ ನಾಳೆ ಒಂದುದಿನ ನಿನ್ನನ್ನು ಚಕ್ರವರ್ತಿಯಾಗಿ ಮಾಡುತ್ತೇನೆ, ಆ ಸುಖವೇನೋ ನೀನೂ ಕೊಂಚ ಅನುಭವಿಸಿ ನೋಡುವಿಯಂತೆ" ಎಂದನು.

ಬಿ. ಅನಂತಕೃಷ್ಣ - ಹಾಸನ್



ಆಲೀಖಾನ್ ತನ್ನ ಕಿವಿಯನ್ನೆ ನಂಬಲಾರದೆ ಹೋದನು. "ಚಕ್ರವರ್ತಿಯವರು, ನನ್ನನ್ನು ನಾಳೆ ಚಕ್ರವರ್ತಿಮಾಡುತ್ತೇನೆಂದೋ ಹೇಳಿದ್ದು?" ಎಂದು ಪಕ್ಕದಲ್ಲಿದ್ದ ಚಾಮರ ಸೇವಕನನ್ನು ಕೇಳಿದನು. "ಹೌದು ಖಾನ್‌ಜೀ" ಎಂದು ಆತನು ಹೇಳಿದ ಮೇಲೆಯೇ ಅಲೀಖಾನನ ಸಂದೇಹವು ಸ್ವಲ್ಪ ತೊಲಗಿತು. ಹಿಡಿಸಲಾರದಷ್ಟು ಸಂತೋಷವು ತುಂಬಿ ಮುಖದಲ್ಲಿ ಸೂಸತೊಡಗಿತು.

ಮತ್ತೆ ಕೊಂಚ ಹೊತ್ತಿಗೆಲ್ಲಾ ನಗರದಲ್ಲಿ "ನಾಳೆ ಅಲೀಖಾನರು ಚಕ್ರವರ್ತಿಯಾಗುತ್ತಾರೆ!" ಎಂದು ಹೊಡೆಯಲ್ಪಟ್ಟ ಡಂಗುರವೂ ಅವನಿಗೆ ಕೇಳಿತು. ದೊಡ್ಡ ದೊಡ್ಡ ಸಾಮಂತರೆಲ್ಲಾ ಬರುವಂತೆ ಆಹ್ವಾನಗಳು ಹೋದುವು. ಅದನ್ನೂ ಅವನು ನೋಡಿದನು.

"ಯಾವಾಗ ಬೆಳಗಾದೀತು? ಯಾವಾಗ ಕಿರೀಟ ಧರಿಸಿಯೇನು" ಎಂದು ಅಲೀಖಾನನು, ರೆಪ್ಪೆಗೆ ರೆಪ್ಪೆ ಹಚ್ಚದೆ, ರಾತ್ರಿಯೆಲ್ಲಾ ಎಚ್ಚರವಾಗಿದ್ದನು.

ಬೆಳಗಾಗುತ್ತಲೇ ಬಾಬರನು ಅವನನ್ನು ಬರಮಾಡಿಸಿ, ಭೂಷಣಾದಿಗಳಿಂದ ಅಲಂಕರಿಸಿ, ಸಿಂಹಾಸನದಮೇಲೆ ಅಧಿಷ್ಠೀಕರಿಸಿದನು. ಬಳಿಕ ಕಿರೀಟಧಾರಣೆಯೂ ನಡೆಯಿತು. ಆ ವೈಭವದ ಸಮಯದಲ್ಲಿ ವಿಶೇಷರೀತಿಯ ಔತಣಗಳು ಜರುಗಿದುವು. ತರುವಾಯ ಸಾಮಂತರು ಒಬ್ಬೊಬ್ಬರೇ ಬಂದು ಅಲೀಖಾನನಿಗೆ ಬಾಗಿ ಬಾಗಿ ಸಲಾಂಸಲ್ಲಿಸಿ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳುತ್ತಿದ್ದಾಗ, ಅಲೀಖಾನನಿಗೆ ಮೈ ತಿಳಿಯದಷ್ಟು ಸಂತೋಷವಾಯಿತು.

ಬಂಗಾರದ ತಟ್ಟೆಗಳಲ್ಲಿ ಒಳ್ಳೊಳ್ಳೆಯ ಫಲ ಭಕ್ಷ್ಯಭೋಜ್ಯಗಳನ್ನು ತಂದು, ಅಲೀಖಾನನಿಗೂ ಆ ಬಳಿಕ ಉಳಿದವರಿಗೂ ಬಡ್ಡಿಸಲ್ಪಟ್ಟಿತು. ಆ ಭಕ್ಷ್ಯಾದಿಗಳಲ್ಲಿ ಕೆಲವು ಅಲೀಖಾನನು ಈವರೆಗೆಂದೂ ರುಚಿನೋಡಿದವನಲ್ಲ.

ಅವುಗಳಲ್ಲಿ "ದಿಲ್ ಖುಷ್" ಎಂಬ ಭಕ್ಷ್ಯವಿಶೇಷವನ್ನು ತಿನ್ನಬೇಕೆಂದು, ಬಹಳದಿನಗಳಿಂದ ಅವನಿಗೆ ಆಸೆಯಾಗಿತ್ತು. ಅದು ಚಕ್ರವರ್ತಿಯೇ ತಿನ್ನುವಂಥಾದ್ದು. ಅದೀಗ ದೊರಕಿತಲ್ಲಾ ಎಂಬ ಆನಂದದಿಂದ, ಅದನ್ನು ಎತ್ತಿಕೊಂಡು ಬಾಯಿಗೆ ಹಾಕಿಕೊಳ್ಳಲಿಕ್ಕಾಗಿ ಸ್ವಲ್ಪ ತಲೆಯನ್ನು ಮೇಲೆತ್ತಿದನು.

ಆಗ ಅವನ ನೆತ್ತಿಗೆ ನೇರಾಗಿ ಮೇಲಿನಿಂದ ತಳತಳನೆ ಹೊಳೆಯುವ ಹರಿತವಾದ ದೊಡ್ಡ ಕತ್ತಿಯೊಂದು ನೇತಾಡುತ್ತಿರುವುದು ತೋರಿತು! ಅದು ಹಗ್ಗದಿಂದ ನೇತಾಡುತ್ತಿದ್ದುದಲ್ಲ; ಸಪೂರವಾದ ತಲಿಗೂದಲಿನಂತಹ ಸರಿಗೆಯಿಂದ! ಒಂದು ಸಣ್ಣ ಗಾಳಿಗೆ ಕತ್ತಿ ಅಲುಗಾಡಿತೆಂದರೆ, ಸರಿಗೆ ತುಂಡಾಗಿ ಕತ್ತಿ ಅವನ ಮೇಲೆಯೇ ಬೀಳುವಂತಿತ್ತು!

ಅದನ್ನು ನೋಡುತ್ತಲೇ ಅಲೀಖಾನನ ಗುಂಡಿಗೆ ನಡುಗಿತು. ದಿಲ್‌ಖುಷ್ ತಿಂಡಿಯ ಮಾತೇ ಮರೆತು ಹೋಯಿತು. ಮೈಜೆವರ ತೊಡಗಿತು. ದೇಹವೆಲ್ಲಾ ಗಡಗಡನೆ ನಡುಗಿತು. ಅದೆಲ್ಲಿಯಾದರೂ ತುಂಡಾಗಿ ಕತ್ತಿ ತನ್ನಮೇಲೆ ಬಿದ್ದರೆ ಮತ್ತೇನುಗತಿ? ಗುಟುಕು ಜೀವ ಉಳಿಯುವುದುಂಟೆ?

"ಅಯ್ಯೊ! ನನಗೆ ಈ ಸಿಂಹಾಸನಬೇಡ! ಕಿರೀಟ ಬೇಡ!! ರಾಜಪದವಿಯೇ ಬೇಡ!!! ನನ್ನದಾರಿಲಿ ನಾನು ಹೋಗುತ್ತೇನೆ" ಎನ್ನುತ್ತಾ ಸಿಂಹಾಸನದಿಂದ ಎದ್ದು ಇಳಿಯಲಿಕ್ಕೆ ನೋಡಿದನು. ಆದರೆ ಬಾಬರನು ಆತನನ್ನು ಕದಲಲಿಕ್ಕೆ ಬಿಡದೆ, "ಅಲೀ! ನನಗೆ ಅಲ್ಲಾನು ಪ್ರಸಾದಿಸಿದ ಸೌಖ್ಯವೇನೋ ಅದನ್ನು ನಾಳೆ ಉದಯದವರೆಗೂ ನೀನು ಅನುಭವಿಸಿಯೇ ತೀರಬೇಕು!!" ಎಂದನು.

ಅಲೀಖಾನನು ದೈನ್ಯದಿಂದ:—"ಪ್ರಭೂ! ನೆತ್ತಿಯಮೇಲೆ ಕತ್ತಿಯನ್ನಿಟ್ಟು ಸುಖಪಡು ಅಂದರೆ, ಹೇಗೆಸ್ವಾಮಿ! ಅಯ್ಯೊ! ಬೇಡ ಬೇಡ!" ಎಂದು ಅತ್ತನು.



ಬಾಬರನು ಮುಗುಳು ನಗುತ್ತ—"ಅಲೀಖಾನ್, ಚಕ್ರವರ್ತಿಯ ಜೀವಿತವೆಂದರೆ ಹೀಗೆಯೇ, ನಿನ್ನ ನೆತ್ತಿಯಮೇಲಿರುವ ಕತ್ತಿಯಂತೆಯೇ, ಚಕ್ರವರ್ತಿಗೆ ಪ್ರತಿಕ್ಷಣವೂ ಪ್ರಾಣಾಪಾಯವೇ" ಎಂದನು.

ಅಲೀಖಾನ್ ಸ್ವಲ್ಪಧೈರ್ಯವನ್ನು ತಂದುಕೊಂಡು "ಹಾಗಾದರೆ ತಾವು ನನ್ನಂತೆ ಭಯಪಡಲಿಲ್ಲವಲ್ಲಾ?" ಎಂದು ಕೇಳಿದನು.

"ಪ್ರಾಣಾಪಾಯಕ್ಕೆ ಭಯಪಡುವುದು ಧೀರರ ಲಕ್ಷಣವಲ್ಲ. ಧೀಮಂತನಿಗೆ ಅಪಾಯವುಂಟೆಂದು ಗೊತ್ತೇ ಇರುತ್ತದೆ. ಆದರೆ ಅವನು ಸಾಮಾನ್ಯಜನರಂತೆ ಪ್ರಾಣಹೋದೀತೇನೋ ಎಂಬ ಭಯದಿಂದ ನಡುಗುತ್ತ ಕೂತುಕೊಳ್ಳುವುದಿಲ್ಲ" ಎಂದನು ಚಕ್ರವರ್ತಿ.

"ಸರಿ, ಮಹಾಪ್ರಭು. ದಯಮಾಡಿ ನನ್ನನ್ನು ನನ್ನಷ್ಟಕ್ಕೆ ಹೋಗಲಿಕ್ಕೆಬಿಡಿ ಆ ಕೂವಲು ಯಾವಕ್ಷಣದಲ್ಲಿ ತುಂಡಾಗಿ ಕತ್ತಿ ನನ್ನ ಕೊರಳಮೇಲೆ ಬೀಳುವುದೋ !" ಎಂದು ಅನೇಕವಿಧವಾಗಿ ಕೂಗಿಕೊಂಡನು. ಆ ಕತ್ತಿ ತಲೆಗೂದಲಿನಿಂದ ನೇತಾಡುತ್ತಿರುವಂತೆ ಅವನ ಕಣ್ಣಿಗೆ ಕಾಣುತ್ತಿತ್ತು.

"ಬಿದ್ದರೆ ಬೀಳಲಿ. ಈ ಇಪ್ಪತ್ನಾಲ್ಕು ಗಂಟೆಯೂ ರಾಜಭೋಗವೆಂದರೇನೋ ನೀನು ಅನುಭವಿಸಿಯೇ ತೀರಬೇಕು" ಎಂದು ಚಕ್ರವರ್ತಿ ಭಟರನ್ನು ಕರೆದು ಆಲೀಖಾನನಿಗೆ ಕಾವಲಿರಿಸಿ, ಹೊರಟು ಹೋಗಿಬಿಟ್ಟನು.

ಪಾಪ, ಅಲೀಖಾನ್ ಬಾಯೆತ್ತಲಿಲ್ಲ. ಇಪ್ಪತ್ನಾಲ್ಕು ಗಂಟೆಯೂ ಪ್ರಾಣವನ್ನು ಮುಷ್ಟಿಯಲ್ಲಿ ಹಿಡಿದುಕೊಂಡು ಕಾಲಕಳೆದನು. ಎದುರು ಇದ್ದ ತಿಂಡಿಗಳಲ್ಲಿ ಒಂದೇ ಒಂದು ದಿಲ್‌ಖುಷ್‌ಕೂಡಾ ಅವನ ಬಾಯಿಗೆ ಹೋಗಿಲ್ಲ. ಆ ರಸಗುಲ್ಲಾ, ಆ ಗುಲಾಬ್‌ಜಾಂ ಎಲ್ಲವೂ ಹಾಗೆಹಾಗೇ ಇದ್ದುವು. ಪ್ರಾಣಕ್ಕೆ ಬಂದಿರುವಾಗ ತಿಂಡಿ ಯಾರಿಗೆಬೇಕು?

"ಅರೇಅಲ್ಲಾ, ಎಂತಹಶಿಕ್ಷೆವಿಧಿಸಿದಿಯೋ!" ಎಂದು ತನ್ನನ್ನುತಾನೇ ನಿಂದಿಸಿಕೊಳ್ಳುತ್ತಾ ಕ್ಷಣವನ್ನು ಯುಗವಾಗಿ ಕಳೆಯುತ್ತಿದ್ದನು. ಗಡು ದಾಟಿದಕೂಡಲೇ 'ಬದುಕು ಬಡಜೀವವೇ' ಎನ್ನುತ್ತಾ ಹೊರಗೆ ಹೊರಟನು.

ಆಗ ಬಾಬರನು ಅವನಿಗೆ ಇದಿರಾಗಿ ಮಾತಾಡಿಸಿದಾಗ— "ಮಹಾಪ್ರಭು! ಹಗೆಗಾರನಿಗಾದರೂ ಈ ಕಿರೀಟ ಬೇಡಸ್ವಾಮಿ" ಎನ್ನುತ್ತ ತನ್ನ ಕಿರೀಟವನ್ನು ಚಕ್ರವರ್ತಿಗೆ ಕೊಟ್ಟನು. ಬಾಬರನು ನಗುತ್ತ—"ಅಲೀಖಾನ್, ಆ ಕತ್ತಿ ಕಿತ್ತುಕೊಂಡು ತನ್ನಮೇಲೆ ಬಿದ್ದೀತೆಂದು ಸುಮ್ಮನೆ ಭಯಪಟ್ಟೆಯೇ ಹೋತು, ಅದೇನೂ ಹಾಗೆಬೀಳಲಿಲ್ಲ. ನಿನ್ನ ಹೇಡಿತನವೇ ನಿನ್ನನ್ನು ಅಷ್ಟು ಭಯಪಡಿಸಿತು. ಚಕ್ರವರ್ತಿಗೆ ಬಂದ ಅದೃಷ್ಟಕ್ಕೆ ಬಹಳಮಂದಿ ಅಸೂಯೆಪಡುವರೇ ಹೊರತು, ಆ ಪದವಿಗೆ ಬೇಕಾದ ಧೈರ್ಯ ಅವರಲ್ಲಿಲ್ಲ ಎಂಬುದು ಅವರಿಗೆ ಗೊತ್ತಾಗುವುದಿಲ್ಲ!" ಎಂದನು.

"ಹೌದು. ತಾವು ಅಪ್ಪಣೆಕೊಡಿಸಿದ್ದು ಸತ್ಯ. ಕಿರೀಟವನ್ನು ಧರಿಸುವ ಅರ್ಹತೆ ಧೀಮಂತರಿಗೇಸರಿ" ಎಂದು ಅಲೀಖಾನನು ಬಾಬರನಿಗೆ ಭಕ್ತಿಯಿಂದ ಸಲಾಂಮಾಡಿದನು.





# ಶರಣಾಗತಿ

**ಕಾ**ಶೀರಾಜ್ಯದ ದೊರೆ ಶಕುಂತಮಹಾರಾಜನು ದೊಡ್ಡ ರಾಮಭಕ್ತನಾಗಿದ್ದ. ಲೋಕವೆಲ್ಲಾ ಅವನ ಭಕ್ತಿಯನ್ನು ಮೆಚ್ಚುತ್ತಿದ್ದರೂ, ಅವನಿಗೆಮಾತ್ರ "ನನ್ನನ್ನುಮಿಂಚಿದ ರಾಮಭಕ್ತರು ಈ ಪ್ರಪಂಚದಲ್ಲೇ ಇಲ್ಲ" ಎಂಬ ಅಹಂಭಾವವಿತ್ತು.

ಭಕ್ತನಾದ ಶಕುಂತನಲ್ಲಿ ಹೊಕ್ಕ ಈ ಅಹಂಕಾರವನ್ನು ತಕ್ಕರೀತಿಯಾಗಿ ಹೋಗಲಾಡಿಸಬೇಕೆಂದು, ನಾರದನು ಯೋಚನೆ ಮಾಡಿದ. ಹಾಗು ಒಡನೆಯೇ ಒಂದು ವ್ಯೂಹವನ್ನೂ ಸೃಷ್ಟಿಮಾಡಿದ.

ಅವನ ವ್ಯೂಹವನ್ನು ಅನುಸರಿಸಿ ರಾಜ್ಯಕ್ಕೆ ದುಷ್ಟಮೃಗಗಳ ಹಾವಳಿಯುಂಟಾಯಿತು. ಪ್ರಜೆಗಳು ಗುಂಪುಗುಂಪಾಗಿ ಬಂದು— "ರಾಜಾ! ಮೃಗಗಳ ಬಾಧೆಯಿಂದ ನಮ್ಮನ್ನು ಕಾಪಾಡಬೇಕು" ಎಂದು ಮೊರೆಯಿಟ್ಟುಕೊಂಡರು.

ಇದಕ್ಕಾಗಿ ಶಕುಂತನು ಒಂದುದಿನ ಅರಣ್ಯಕ್ಕೆ ಬೇಟೆಯಾಡಲು ಹೋದನು. ಬೇಟೆಯಾಡಿ ಶ್ರಮಪರಿಹಾರ ಮಾಡಿಕೊಳ್ಳಲಿಕ್ಕಾಗಿ, ಬಳಿಯಲ್ಲಿ ತೋರಿದ ಒಂದು ಋಷ್ಯಾಶ್ರಮವನ್ನು ಹೊಕ್ಕನು.

ಆ ಆಶ್ರಮದಲ್ಲಿ ಅನೇಕ ಋಷಿಗಳು ಸಮಾವೇಶರಾಗಿದ್ದರು. ವಿಚಾರಿಸಲು ಅದು ವಿಶ್ವಾಮಿತ್ರನ ಆಶ್ರಮವೆಂದು ತಿಳಿದುಬಂತು. ವಿಶ್ವಾಮಿತ್ರನು ಶಕುಂತನಿಗೆ ರಾಜೋಪಚಾರಗಳಿಂದ ಆದರಿಸಿ, ಕುಶಲಪ್ರಶ್ನೆಗಳನ್ನುಮಾಡಿ ಸತ್ಕರಿಸಿದನು. ಬಳಲಿಕೆ ತೀರಿದಮೇಲೆ ಶಕುಂತನು ಹೊರಟುಹೋಗಲೆಂದು ಎದ್ದನು. ಆಗ ಅಲ್ಲಿ ಎಲ್ಲರಿಗೂ ಮುಂದೆ ವಸಿಷ್ಠರು ಕುಳಿತಿದ್ದರು. ಆದುದರಿಂದ ಶಕುಂತನು ಕೈಮುಗಿದು, "ವಸಿಷ್ಠಾದಿ ಮಹರ್ಷಿಗಳೆ! ಅನುಜ್ಞೆ ಕೊಡಬೇಕು. ಹೋಗಿಬರುತ್ತೇನೆ" ಎಂದಂದು ಹೊರಟುಹೋದನು.

ಆಗ ಅಲ್ಲಿಯೇ ಇದ್ದ ನಾರದನು ಪಕ್ಕದಲ್ಲಿದ್ದ ವಿಶ್ವಾಮಿತ್ರನನ್ನು ಕುರಿತು,— "ನೋಡಿದಿಯಾ ಗಾಧಿನಂದನಾ! ಏನುಗರ್ವ ಈ ಶಕುಂತನಿಗೆ! ನಿನ್ನ ಆಶ್ರಮಕ್ಕೆ ಬಂದು, ನಿನ್ನ ಆತಿಥ್ಯವನ್ನು ಹೊಂದಿ, ಹೊರಟುಹೋಗುತ್ತ, ನಿನ್ನನ್ನು ಕೊಂಚವೂ ಲಕ್ಷ್ಯ

ಯಚ್. ಯಂ. ರಂಗ - ಸುರತಕಲ್ಲು



ಮಾಡದೆ, ವಸಿಷ್ಠರಿಂದ ಅನುಜ್ಞೆ ಪಡೆದು ಕೊಂಡು ಹೋದನಲ್ಲ? ಇದರ ಅಂತರಾರ್ಥ ಗ್ರಹಿಸಿದಿಯಾ?" ಎಂದನು.

ಕೂಡಲೇ ಉರಿದೆದ್ದನು ವಿಶ್ವಾಮಿತ್ರ. "ನಾರದ, ನೀನು ಹೇಳಿದ್ದು ನಿಜವೇ. ಗರ್ವದಿಂದ ಕಣ್ಣೇಕಾಣುವುದಿಲ್ಲ ಅವನಿಗೆ! ಆಹಾ! ಈಗಲೇ ಅವನಿಗೆ ತಕ್ಕಬುದ್ಧಿ ಕಲಿಸುವೆನು!"... ಎಂದು, ವಿಶ್ವಾಮಿತ್ರನು ಸರಸರನೆ ಅಲ್ಲಿಂದ ಹೊರಟು ಶ್ರೀರಾಮನಬಳಿಗೆ ನಡೆದನು.

ವಿಶ್ವಾಮಿತ್ರನು ಶ್ರೀರಾಮಚಂದ್ರನ ಸಭಾಸ್ಥಾನಕ್ಕೆ ಬಂದು ಅತ್ಯಂತ ಆವೇಶದಿಂದ— "ನನ್ನ ಶಿಷ್ಯೋತ್ತಮನಾದ ರಾಮ! ನಿನ್ನಿಂದ ನನ್ನದೊಂದು ಸ್ವಂತ ಕಾರ್ಯವಾಗಬೇಕು. ನೆರವೇರಿಸುವೆನೆಂದು ವಾಗ್ದಾನಮಾಡುವಿಯಾ?" ಎಂದನು.

ಶ್ರೀರಾಮನು ಆಶ್ಚರ್ಯದಿಂದ-"ಮಾಡುವೆನು ಗುರೂಜೀ! ನನ್ನಮೇಲೆ ನಿಮಗೇಕೆ ಸಂಶಯ?" ಎಂದನು.

ವಿಶ್ವಾಮಿತ್ರನು ರಾಮಚಂದ್ರನಿಂದ ಮಾತು ಪಡೆದುಕೊಂಡು— "ರಾಮಾ, ಕಾಶೀರಾಜನಾದ ಶಕುಂತನಿಂದ ನನಗೆ ದೊಡ್ಡ ಅವಮಾನವಾಗಿಹೋಯಿತು. ನಿನ್ನ ಬಾಣದಿಂದ ಅವನ ತಲೆಯನ್ನು ಛೇದಿಸಬೇಕು" ಎಂದನು.

ರಾಮನಿಗೆ ಯೋಚನೆ ಹಿಡಿಯಿತು. "ದೊಡ್ಡ ಸಮಸ್ಯೆಯೇ ಇದಿರಾದಂತಾಯಿತು. ಶಕುಂತನು ನನ್ನ ಭಕ್ತನಾಗಿರುವನಲ್ಲ?.... ಸರಿ. ಯೋಚನೆಗೆ ಸಮಯವಿಲ್ಲ. ಗುರುವಿನಾಜ್ಞೆಯೇ ದೊಡ್ಡದು!" ಎಂದು ಯೋಚಿಸಿ ರಾಮನು "ಸರಿ" ಎಂದು ಒಪ್ಪಿ ವಿಶ್ವಾಮಿತ್ರನನ್ನು ಕಳುಹಿಸಿದನು.

ಅತ್ತ ನಾರದನು, ಈ ಸಮಾಚಾರವನ್ನೆಲ್ಲಾ ಶಕುಂತನಿಗೆ ತಿಳಿಸಿ "ರಾಜಾ! ನಿನ್ನ ದೇವರಾದ ರಾಮನ ಬಾಣದಿಂದಲೇ ನೀನು ಹತನಾಗುತ್ತಿಯಲ್ಲಾ!" ಎಂದು ಅವನಿಗೆ ದಿಗಿಲು ಹುಟ್ಟಿಸಿದನು. "ನಾರದಾ! ನನಗೆ ನೀನೇ ಗತ್ಯಂತರವನ್ನು ತೋರಿಸಬೇಕು" ಎಂದು ಶಕುಂತನು ಬೇಡಿಕೊಂಡನು. ಆಗ ನಾರದನು ಅವನಿಗೊಂದು ಉಪಾಯವನ್ನು ತಿಳಿಸಿ, ತನ್ನ ದಾರೀ ಹಿಡಿದನು.

ಆ ಉಪಾಯವನ್ನು ಅನುಸರಿಸಿ ಶಕುಂತನು ಬೇಗಬೇಗನೇ ಅಂಜನಾದೇವಿಯ ಆಶ್ರಮವನ್ನುಸೇರಿ, ದೊಡ್ಡ ಅಪಾಯಕ್ಕೆ ಸಿಕ್ಕಿಬಿದ್ದವ

ನಂತೆ ಆರ್ತನಾದಮಾಡಿದನು. ಅದನ್ನು ಕೇಳಿ ಅಂಜನಾದೇವಿ ಓಡಿಬಂದು, "ಭಯ ವಿಲ್ಲ. ನಾನಿದ್ದೇನೆ. ನಿನಗೆಬಂದ ಅಪಾಯವೇನೋ ಹೇಳು" ಎಂದು ಅಭಯದಾನಮಾಡಿ ಧೈರ್ಯ ಹೇಳಿದಳು. ಆಗ ಶಕುಂತನು, ತನಗೆಬಂದ ಆಪತ್ತನ್ನು ವಿವರಿಸಿ, "ನೀವೇ ರಕ್ಷಿಸಬೇಕು" ಎಂದು ಶರಣಾಗತನಾದನು.

ಅಂಜನಾದೇವಿಗೂ ದೊಡ್ಡ ಸಮಸ್ಯೆ ಗಿಟ್ಟಿತು. "ಅಯ್ಯೋ! ನಮ್ಮ ರಾಮಚಂದ್ರ ನನ್ನು ಕುರಿತೇ ಸಿಕ್ಕುಬಂತಲ್ಲ! ಶರಣಾಗತ ನಾದ ಇವನನ್ನು ಹೇಗೆರಕ್ಷಿಸುವುದು?" ಎಂದು ತೀವ್ರಾಲೋಚನೆಯಲ್ಲಿ ಬಿದ್ದಳು.

ಅಷ್ಟರಲ್ಲಿ ಅಂಜನೇಯನು ಅಲ್ಲಿಗೆಬಂದನು, ಚಿಂತಿಸುತ್ತಿದ್ದ ತಾಯಿಯನ್ನು ನೋಡಿದನು. "ಅಮ್ಮಾ, ನಾನಿರುವಾಗ ನಿನಗೇಕೆ ವಿಚಾರ? ಏನಾಗಬೇಕೋ ಹೇಳು, ನೆರವೇರಿಸಿ ಬಿಡು ತ್ತೇನೆ" ಎಂದು ತಾಯಿಯ ಪಾದದಮೇಲೆ ಬಿದ್ದನು.

ಹನುಮಂತನನ್ನು ಎಬ್ಬಿಸಿ ಅಂಜನಾ ದೇವಿ ಕಣ್ಣೀರು ಸುರಿಸುತ್ತಾ ಹೇಳಿದಳು: "ಕಂದಾ, ಆರ್ತನಾದವನ್ನು ಕೇಳಿ ಸರಳರೀತಿ ಯಾಗಿ ಈ ಶಕುಂತನಿಗೆ ಅಭಯದಾನಮಾಡಿ ಬಿಟ್ಟೆ. ಅನಂತರ ವಿಚಾರಿಸಿದಾಗ ನಮ್ಮ ಶ್ರೀರಾಮಚಂದ್ರನಲ್ಲಿಯೇ ನಮಗೆವೈರ ಪ್ರಾಪ್ತವಾಯಿತೆಂದು ಗೊತ್ತಾಯಿತು. ಅಯ್ಯೋ! ಇದೆಂತಹ ಅಗ್ನಿಪರೀಕ್ಷೆ ನಮಗೆ!"

ಇದನ್ನು ಕೇಳಿ ವೀರಮಾರುತಿ,—"ಅಮ್ಮ, ನೀನೇನೂ ದುಃಖಿಸಬೇಡ. ರಾಮಬಾಣಕ್ಕೆ




ಹೇಗೆ ಹಿಮ್ಮೊಗವಿಲ್ಲವೋ ನಿನ್ನ ಮಾತಿಗೂ ಹಾಗೆಯೇ ಹಿಮ್ಮೊಗವಿಲ್ಲ. ರಾಮನೇ ಅಲ್ಲ, ಬ್ರಹ್ಮನಿಗಾದರೂ ನಿನ್ನ ಮಾತನ್ನು ತಿರುಗಿಸಲು ಸಾಧ್ಯವಿಲ್ಲ. ಗುರುವಿನಾಜ್ಞೆಯನ್ನು ನೆರವೇರಿ ಸುವುದು ರಾಮನಿಗೆ ಕರ್ತವ್ಯವಾದರೆ, ನಿನ್ನ ಆಜ್ಞೆಯನ್ನು ನೆರವೇರಿಸುವುದು ನನ್ನವಿಧಿ" ಎಂದನು ಗುಡುಗು ಗುಡುಗಿದಂತೆ.

ಅಷ್ಟರಲ್ಲಿ ಶಾಂತಮೂರ್ತಿಯಾದ ಶ್ರೀರಾ ಮಚಂದ್ರನು ಧನುಷ್ಟಂಕಾರಮಾಡುತ್ತಾ ಅಂಜನಾಶ್ರಮಕ್ಕೆ ಬಂದು, ಹನುಮಂತನನ್ನು ಕುರಿತು-"ನನ್ನ ಗುರುವಿಗೆ ಪರಾಭವವನ್ನುಂ ಟುಮಾಡಿದ ಶಕುಂತನು ಇಲ್ಲಿ ಅಡಗಿದ್ದಾ ನೆಂದು ನಾನರಿತೆ. ಅವನನ್ನು ಕೂಡಲೇ ಹೊರಗೆ ಬಿಡು ಹನುಮಾ!" ಎಂದು ಗಂಭೀರ ವಾಗಿ ಆಜ್ಞೆಯನ್ನುಮಾಡಿದನು.

"ಅವನನ್ನು ಮಾತ್ರ ಬಿಡಲಾಗುವುದಿಲ್ಲ. ನನ್ನ ತಾಯಿ ಅವನಿಗೆ ಅಭಯವಿತ್ತಿದ್ದಾಳೆ" ಎಂದನು ಖಂಡಿತಸ್ವರದಿಂದ ವೀರಾಂಜನೇಯ.

"ಧರ್ಮರಕ್ಷಕನು ನಾನು ನಿಜವಾದರೆ, ನನ್ನ ಗುರುವನ್ನು ಪರಾಭವಿಸಿದ ಕಾಶೀಪತಿ ಶಕುಂತನ ತಲೆಯನ್ನು ಈ ಬಾಣವು ಛೇದಿಸಬೇಕು!" ಎಂದು ಆಣೆಮಾಡುತ್ತಾ ರಾಮನು ತನ್ನ ಬಾಣವನ್ನು ಬಿಟ್ಟನು.

"ರಾಮಭಕ್ತನು ನಾನು ನಿಜವಾಗಿದ್ದರೆ, ರಾಮನ ಬಾಣದಿಂದ ಕಾಶೀಪತಿ ಶಕುಂತನಿಗೆ ಯಾವ ಅಪಾಯವೂ ಬಾರದಿರಲಿ!" ಎನ್ನುತ್ತಾ ಆಂಜನೇಯನು ಓಡಿಬರುವ ರಾಮಬಾಣಕ್ಕೆ ಭಕ್ತಿಯಿಂದ ಕೈಮುಗಿದನು.

ಅವನಮುಂದೆ ರಾಮಬಾಣವು ಗಕ್ಕೆಂದು ನಿಂತುಹೋಯಿತು! ನಿಂತಲ್ಲೇ ಗರಗರನೆ ತಿರುಗುತಿತ್ತು !!

ಅಮೋಘವಾಗಿ ತಿರುಗದ ರಾಮಬಾಣವು ನಿಂತುಹೋದದ್ದು ನೋಡಿ ಸಮಸ್ತಭುವನಗಳೂ ನಡುಗಿದುವು! ಎಲ್ಲೆಲ್ಲಿಯೂ ಹಾಹಾಕಾರವು ಕೇಳಿಸಿತು!! ದೇವಗಣ ಋಷಿಗಣವೆಲ್ಲಾ ಅಲ್ಲಿಬಂದು ಸೇರಿದರು!!! "ಇದು ಧರ್ಮಯುದ್ಧ! ರಾಮನೇ ಹನುಮ, ಹನುಮನೇ ರಾಮ!!" ಎಂದರು ಹಲವರು. ಇದೆಲ್ಲಾ ನಾರದನ ತಂತ್ರವೆಂದು ಎಲ್ಲರಿಗೂ ತಿಳಿದುಹೋಯಿತು.

"ನನ್ನ ಬಾಣಕ್ಕೆ ತಿರುಗುಮುಖವಿಲ್ಲ!" ಎಂದನು ಶ್ರೀರಾಮ.

ಕೂಡಲೇ ಹನುಮನು, "ಹೇ! ರಾಮಬಾಣವೆ, ನನ್ನ ಹೃದಯದಲ್ಲಿ ಐಕ್ಯವಾಗು" ಎಂದು ಪ್ರಾರ್ಥಿಸಿ ಎದೆಯೊಡ್ಡಿದನು.

ಬಾಣವು ಅವನ ಗುಂಡಿಗೆಯೊಳಗೆ ತೂರಿಕೊಂಡು ಹೋಯಿತು. ಆಗ ಆ ಗುಂಡಿಗೆಯಲ್ಲಿ ಶ್ರೀರಾಮಚಂದ್ರನ ದಿವ್ಯಮಂಗಳ ವಿಗ್ರಹವಿರುವುದು ಎಲ್ಲರಿಗೂ ಪ್ರತ್ಯಕ್ಷವಾಯಿತು.

ಶಕುಂತನು ತನ್ನ ಅಪರಿಪಕ್ವ ಭಕ್ತಿಯನ್ನು ಅರಿತುಕೊಂಡು ನಾಚಿ ತಲೆ ತಗ್ಗಿಸಿಕೊಂಡು ಹೋದನು.

ರಾಮಭಕ್ತ ಹನುಮಂತನನ್ನು ಸ್ತುತಿಸುತ್ತಾ, ದೇವತೆಗಳು ಹೂವಿನ ಮಳೆ ಗರೆದರು. ತಾಯಿ ಅಂಜನಾದೇವಿಯ ಹಸ್ತವು ತಗಲಿದಾಗ ಹನುಮಂತನ ಗುಂಡಿಗೆ ಎಂದಿನಂತೆ, ಸರಿಯಾಗಿ ಕೂಡಿಕೊಂಡಿತು.






# ಅದೃಶ್ಯ ಸೇವಕಿ

**ಪೂ**ರ್ವಕಾಲದಲ್ಲಿ ವಕ್ರಬುದ್ಧಿ ಎಂಬರಾಜನು ಊಹಾನಗರವನ್ನು ಪಾಲಿಸಿಕೊಂಡಿದ್ದನು. ಅವನ ಸೈನ್ಯದೊಳಗೆ ಇರುವವರಲ್ಲೆಲ್ಲಾ ಪ್ರತಾಪನೆಂಬವನು ಬಹುದೊಡ್ಡವೀರ.

ಒಂದುದಿನ ಪ್ರತಾಪನು ಬೇಟೆಯಾಡಲಿಕ್ಕಾಗಿ ಸಮೀಪದ ಅಡವಿಗೆ ಹೋದನು. ಅಲ್ಲೊಂದು ಕೊಳವಿತ್ತು. ಅದರ ಬದಿಯಲ್ಲಿರುವ ಪೊದರಿನ ಮರೆಯಲ್ಲಿ ಪ್ರತಾಪನು ಅಡಗಿ ಕುಳಿತುಕೊಂಡನು. ಮೃಗಗಳು ನೀರು ಕುಡಿಯಲಿಕ್ಕಾಗಿ, ಆ ಕೊಳಕ್ಕೆಬಂದರೆ, ಹೊಡೆಯಬಹುದೆಂದು ಅವನ ಊಹೆ.

ಎಷ್ಟುಹೊತ್ತು ಹೊಂಚಿಕೊಂಡು ಕಾದು ಕುಳಿತರೂ ಅಡವಿ ಜಂತುಗಳು ಒಂದೂ ಬರಲಿಲ್ಲ. ಸಾಯಂಕಾಲವಾಯಿತು. ಅಷ್ಟರಲ್ಲಿ ಆಕಾಶದಿಂದ ಏಳು ಹಂಸಗಳು ಆ ಕೊಳದ ಬದಿಯಲ್ಲಿ ಎರಗಿ, ತಮ್ಮ ರೆಕ್ಕೆಗಳನ್ನು ಕಳಚಿ ಕೊಳದ ಬದಿಯಲ್ಲಿಟ್ಟುವು. ಆಗ ನೋಡಲಾಗಿ ಆ ಹಂಸಗಳು ಅಪೂರ್ವ ಸುಂದರಿಯರಾದ ಏಳುಮಂದಿ ದೇವಕನ್ಯೆಯರಾಗಿ ಕಂಗೊಳಿಸಿದರು. ಅವರೆಲ್ಲಾ ಕಲಕಲನೆ ನಗುತ್ತ ಕೊಳಕ್ಕಿಳಿದು ಜಲಕ್ರೀಡೆ ಗಾರಂಭ ಮಾಡಿದರು.

ಪ್ರತಾಪನು ಸದ್ದುಮಾಡದೆ ಪೊದರಿನ ಮರೆಯಿಂದ ಹೊರಗೆಬಂದು, ಅಂದವಾದ ಒಂದುಜತೆ ರೆಕ್ಕೆಯನ್ನು ಎತ್ತಿಕೊಂಡು, ಮತ್ತೆ ಪೊದರಿನೆಡೆಯಲ್ಲಿ ಅಡಗಿಕೊಂಡನು.

ದೇವಕನ್ಯೆಯರು ಸಾಕಾಗುವಷ್ಟು ಜಳಕವಾಡಿ ದಡಕ್ಕೆಬಂದು ಯಾರಾರ ರೆಕ್ಕೆಯನ್ನು ಅವರವರು ಧರಿಸಿಕೊಂಡು, ರೆವ್ವರಿವ್ವನೆ ಹಾರಿ ಹೋದರು. ಹಾಗೆ ಹೋದವರು ಆರುಮಂದಿ ಮಾತ್ರ. ಏಳನೆಯವಳಿಗೆ ರೆಕ್ಕೆಗಳು ಸಿಕ್ಕಲಿಲ್ಲ. ಅವಳು ಅಲ್ಲಿ ಇಲ್ಲಿನೋಡುತ್ತ ನಿಲ್ಲಬೇಕಾಯಿತು. "ನನ್ನ ರೆಕ್ಕೆಗಳನ್ನು ತೆಗೆದವರಾರೋ ಅವರು ದಯಮಾಡಿ ಅದನ್ನು ನನಗೆ ಕೊಟ್ಟುಬಿಡಿರಿ! ಮಕ್ಕಳನ್ನುಹೆತ್ತ ತಂದೆ ತಾಯಿಗಳಾದರೆ ಅವರು ನನ್ನನ್ನೂ ತಮ್ಮ ಮಗಳಾಗಿ ನೋಡಬೇಕು. ಕನ್ಯೆಯಾದರೆ ನಾನು ಅವಳ ತಂಗಿಯಾಗಿದ್ದೇನು. ಮದುವೆಯಾಗದ ಗಂಡುಸೇ ಆಗಿದ್ದರೆ ನಾನು ಮದುವೆಮಾಡಿಕೊಂಡೇನು. ದಯಮಾಡಿ ನನ್ನ ರೆಕ್ಕೆಗಳನ್ನು ನನಗೆಕೊಟ್ಟು

ಪಿ. ಯು. ಶೆಟ್ಟಿ – ಹರಿಹರ



ಬಿಡಿರಿ !" ಎಂದು ಅವಳು ಕನಿಕರ ಹುಟ್ಟು ವಂತೆ ಪ್ರಾರ್ಥಿಸಿಕೊಂಡಳು.

"ಇಕೋ ನಿನ್ನ ರೆಕ್ಕೆಗಳು, ಇವುಗಳನ್ನು ಧರಿಸಿಕೊಂಡು ಹಂಸವಾಗಿ ಸ್ವೇಚ್ಛೆಯಿಂದ ನಿನ್ನಲೋಕಕ್ಕೆ ಹಾರಿಹೋಗು. ನಿನ್ನ ಜತೆಯವರಿಂದ ಇಷ್ಟು ಹೊತ್ತು ನಿನ್ನನ್ನು ಬೇರ್ಪಡಿಸಿದ್ದಕ್ಕಾಗಿ ನನ್ನನ್ನು ಕ್ಷಮಿಸು" ಎನ್ನುತ್ತಾ, ಪ್ರತಾಪನು ರೆಕ್ಕೆಗಳನ್ನು ಅವಳ ಮುಂದೆ ನೀಡಿದನು.

ದೇವಕನ್ಯೆ ರೆಕ್ಕೆಗಳನ್ನು ತೆಗೆದುಕೊಳ್ಳದೆ, "ನೀವು ಬಹಳ ಒಳ್ಳೆಯವರಾಗಿ ಕಾಣುತ್ತೀರಿ. ಮನುಷ್ಯರಲ್ಲಿಕೂಡಾ ಇಷ್ಟು ಒಳ್ಳೆಯವರೂ ಸುಂದರರೂ ಇದ್ದಾರೆಯೆ?" ಎಂದಳು ಆಶ್ಚರ್ಯದಿಂದ.

ಅದಕ್ಕೆ ಪ್ರತಾಪನು—"ಇಷ್ಟು ನನ್ನನ್ನು ಮೆಚ್ಚಿಕೊಳ್ಳುವಿಯಾದರೆ. ನನ್ನನ್ನು ನೀನು ಮದುವೆ ಮಾಡಿಕೊಳ್ಳಕೂಡದೆ?" ಎಂದನು.

ಅವಳು ತನ್ನ ಕೊರಳಲ್ಲಿದ್ದ ನವರತ್ನ ಮಾಲಿಕೆಯನ್ನು ತೆಗೆದು ಪ್ರತಾಪನ ಕೊರಳಿಗೆ ಹಾಕಿದಳು. ನಿರೀಕ್ಷಿಸದೆಯೇ ಬಂದ ಈ ಅದೃಷ್ಟಕ್ಕೆ ಪ್ರತಾಪನು ಬಹಳ ಸಂತೋಷಪಟ್ಟ.

ಹೀಗೆ ಅವನು ತನ್ನ ಹೆಂಡತಿಯೊಂದಿಗೆ ನಗರದಕಡೆಗೆ ತಿರುಗಿದನು. ಅಷ್ಟರಲ್ಲಿ ಆ ದೇವಕನ್ಯೆಯ ಚೆಲುವಿಕೆಯ ವರ್ತಮಾನವು ಅರಸನ ಕಿವಿಗೆ ಬಿತ್ತು. ದೊರೆಯಾದ ವಕ್ರಬುದ್ಧಿ. ವೇಷ ಬದಲಾಯಿಸಿಕೊಂಡು ಹೋಗಿ ಆ ದೇವಕನ್ಯೆಯನ್ನು ನೋಡಿಬಂದನು.

ಬಳಿಕ ಅರಸನು ಪ್ರತಾಪನನ್ನು ಕರೆಸಿ ಬಹಳ ಪ್ರೀತಿಯಿಂದ— "ಪ್ರತಾಪ್! ನಿನ್ನಿಂದ ಮುಖ್ಯವಾದೊಂದು ಕೆಲಸವಾಗಬೇಕು. ಏಳು ಸಮುದ್ರಗಳಾಚೆಗೆ ಒಂದು ಬೆಟ್ಟವಿದೆ. ಆ ಬೆಟ್ಟದ ಕೊನೆಯುಲ್ಲಿ ಒಂದು ಕೋಟೆಯುಂಟು. ಅಲ್ಲಿನ ರಾಜ ಚಿತ್ರಾಂಗ ಎಂಬ ಯಕ್ಷ. ಅವನಿಗೆ ಒಂಭತ್ತು ಅಂಗುಲದ ಶರೀರವೂ, ತೊಂಭತ್ತು ಗಜ ಉದ್ದದ ಜುಟ್ಟೂ ಇವೆ. ಅವನ ಹತ್ತಿರ ಅದೃಶ್ಯಸೇವಕಿ ಎಂಬ ಭೂತವೊಂದಿದೆ. ನೀನು ಹೇಗಾದರೂ ಆ ಭೂತವನ್ನು ವಶಪಡಿಸಿಕೊಂಡು ಬರಬೇಕು. ಬಂದರೆ ನಿನ್ನನ್ನು ಸೇನಾಧಿಪತಿಯಾಗಿ ಮಾಡುತ್ತೇನೆ" ಎಂದನು.

ಪ್ರತಾಪನು ವ್ಯಸನದಿಂದಲೇ ಮನೆಗೆ ಬಂದನು. ಮನುಷ್ಯರಿಗೆ ಅಸಾಧ್ಯವಾದ

ಮಹತ್ತರ ಕಾರ್ಯವನ್ನು ಹೇಗೆ ಸಾಧಿಸುವೆನೋ ಎಂದು ಚಿಂತಿಸಿದನು. ಅವನ ಚಿಂತೆಯ ಕಾರಣವನ್ನು ತಿಳಿದು, ಅವನ ಪತ್ನಿ ದೇವಕನ್ಯೆ—"ನೀವೇನೂ ಯೋಚಿಸಬೇಡಿ. ಈ ಬೆಳ್ಳಿಯ ಬಂತಿಯನ್ನು ಎತ್ತಿಕೊಂಡು ಹೋಗಿ, ನಗರದ ಹೊರಗೆ ನೆಲದಮೇಲೆ ಇಡಿರಿ. ಅದು ನಿಮ್ಮ ಇದಿರಿನಲ್ಲಿ ಉರುಳುತ್ತಾ ಹೋಗಿ ನಿಮ್ಮನ್ನು ಸ್ವರ್ಗಲೋಕಕ್ಕೆ ಕರೆದೊಯ್ಯುತ್ತದೆ. ಹಾಗು ಅಲ್ಲಿರುವ ನನ್ನ ತಾಯಿಯ ಮನೆಗೇ ನಿಮ್ಮನ್ನು ಮುಟ್ಟಿಸಿಬಿಡುತ್ತದೆ. ನಿಮ್ಮ ಕೊರಳಿಗೆ ನಾನು ಹಾಕಿದ ರತ್ನಹಾರದ ಗುರುತನ್ನು ನನ್ನ ತಾಯಿಗೆ ಹೇಳಿ, ನನ್ನ ಕ್ಷೇಮವಾರ್ತೆಯನ್ನು ಕೂಡಾ ತಿಳಿಸಿರಿ" ಎಂದು ಹೇಳಿ, ಆ ಬೆಳ್ಳಿಯ ಬಂತಿಯನ್ನು ಅವನಕೈಗೆ ಕೊಟ್ಟಳು.

ಪ್ರತಾಪನು ಅವಳು ಹೇಳಿದಂತಯೇ ಆಚರಿಸಿ, ನಿರ್ವಿಘ್ನವಾಗಿ ಅತ್ತೆಮನೆಗೆ ಮುಟ್ಟಿದನು.

ಇಷ್ಟರಲ್ಲಿ ಇತ್ತ ಊಹಾನಗರದಲ್ಲಿ ವಕ್ರಬುದ್ಧಿರಾಜನು ಪ್ರತಾಪನ ಪತ್ನಿಯನ್ನು ತನ್ನ ಬಳಿಗ ಕರೆಸಿ—"ಇನ್ನು ನಿನ್ನ ಗಂಡನು ತಿರುಗಿ ಬರುವನೆಂಬ ಆಸೆಬಿಡು. ನೀನು ನನ್ನನ್ನು ವರಿಸಿಕೊಂಡು, ರಾಣಿಯಾಗಿ ಮೆರೆಯಬೇಕೆಂಬುದು ನನ್ನ ಕೋರಿಕೆ" ಎಂದು ಹೇಳಿದನು.

ದೇವಕನ್ಯೆ ಒಪ್ಪಲಿಲ್ಲ ವಕ್ರಬುದ್ಧಿ, ಹಗೆ ತೊಟ್ಟು, ಅವಳನ್ನು ಸಮುದ್ರದ ದಡದಲ್ಲಿರುವ ಒಂಟಿಗಂಬದ ಉಪ್ಪರಿಗೆಯಮೇಲೆ ಸೆರೆಹಾಕಿಟ್ಟನು.




ಅತ್ತ ದೇವಲೋಕದಲ್ಲಿ ದೇವಕನ್ಯೆಯ ಬಂಧುಗಳು ಒಂದು ಕಪ್ಪೆಯನ್ನು ಜತೆಮಾಡಿ ಪ್ರತಾಪನನ್ನು ಕಳುಹಿಸಿಕೊಟ್ಟರು.

ಪ್ರತಾಪನು ಆ ಕಪ್ಪೆಯ ಹಿಂದೆಯೇ ಹೋದ. ಮೀನಿನಮೇಲೆ ಕುಳಿತುಕೊಂಡು ಸಪ್ತ ಸಮುದ್ರಗಳನ್ನೂ ದಾಟಿದ್ದಾಯಿತು. ಬಳಿಕ ಅಡವಿ, ಅಡವಿಯಾಚೆಯ ಬೆಟ್ಟ, ಬೆಟ್ಟದಮೇಲಿನ ಕೋಟೆ, ಇಲ್ಲಿಯವರೆಗೂ ಆ ಕಪ್ಪೆ ಅವನನ್ನು ಕರಕೊಂಡುಬಂತು. ಅಲ್ಲಿ ಆ ಕಪ್ಪೆ ನಿಂತು ಪ್ರತಾಪನನ್ನು ಕುರಿತು—"ತಮ್ಮಾ! ಇದೇ ಚಿತ್ರಾಂಗನ ಕೋಟೆ. ನಾನು ನಿನ್ನನ್ನು ನಿರೀಕ್ಷಿಸುತ್ತಾ ಕೋಟೆಯ ಹೊರಗೆ ಇರುತ್ತೇನೆ. ನೀನು ಹೋಗಿಬಾ ನಿನಗೆ ಜಯವಾಗಲಿ" ಎಂದು ಆಶೀರ್ವದಿಸಿತು.



ಪ್ರತಾಪನು ಕೋಟೆಯೊಳಗೆ ಹೊಕ್ಕನು. ನೋಡಲಾಗಿ ಅದೊಂದು ಕೋಟೆಯಂತಿರ ಲಿಲ್ಲ. ಕತ್ತಲೆಯಾದ ಕೋಣೆಯಂತಿತ್ತು. ಅವನು ತಡವರಿಸಿಕೊಳ್ಳುತ್ತಾ ಹೋಗಿ, ಒಂದುಮೂಲೆಯಲ್ಲಿ ಆಯಾಸಪರಿಹಾರಮಾಡಿ ಕೊಳ್ಳಲಿಕ್ಕಾಗಿ ಕುಳಿತನು.

ಮತ್ತೆ ಸ್ವಲ್ಪಹೊತ್ತಿನಲ್ಲಿ ಭಢಾಲ್ಲೆಂದೊಂದು ಬಾಗಿಲಿನ ಶಬ್ದವು ಕೇಳಿತು. ಆಮೇಲೆ "ಅದೃಶ್ಯಸೇವಕಿ! ಅದೃಶ್ಯಸೇವಕಿ!" ಎಂದು ಮೇಘಗರ್ಜನೆಯಂತೆ ಯಾರೋ ಗಟ್ಟಿಯಾಗಿ ಕರೆದ ಶಬ್ದ.

ಅದುವರೆಗೆ ಕತ್ತಲೆಯಾಗಿದ್ದ ಕೋಟೆಯೊಳಭಾಗವೆಲ್ಲಾ ದೀಪಗಳಿಂದ ಹಚ್ಚಹಗಲಿನಂತೆ ಬೆಳಗಿತು. ಪ್ರತಾಪನು ಚಟಕ್ಕನೆ ಒಂದು ಕಂಬದಹಿಂದೆ ಹೋಗಿ ಅವಿತುಕೊಂಡು ಅಲ್ಲಿ ಬರುವವರು ಯಾರೆಂದು ನೋಡಿದನು.

ನೋಡಿದರೆ, ಒಂಭತ್ತು ಅಂಗುಲದ ಶರೀರವೂ ತೊಂಭತ್ತುಗಜ ಉದ್ದದ ಜುಟ್ಟೂ ಇರುವ ಆ ಯಕ್ಷನಾಗಿದ್ದ—"ಅಬ್ಬ! ಇವನೇ ಅಷ್ಟು ದೊಡ್ಡ ಶಬ್ದ ಮಾಡಿದ್ದೊ?" ಎಂದು ಪ್ರತಾಪನು ಆಶ್ಚರ್ಯಪಡುತ್ತಿರುವಾಗ, ಯಕ್ಷನು "ಹೇ ಅದೃಶ್ಯಸೇವಕಿ! ಏನಿಷ್ಟು ತಡ? ಲೋಕವೆಲ್ಲಾ ತಿರುಗಿ ತಿರುಗಿ ಆಯಾಸದಿಂದ ಬಂದಿದ್ದೇನೆ. ಕಾಲು ತೊಳೆದುಕೊಳ್ಳಲಿಕ್ಕೆ ನೀರು ಕೊಡಬೇಕೆಂದು ತಿಳಿಯುವುದಿಲ್ಲವೆ?" ಎಂದು ಕೂಗಿದನು.

ಬಂಗಾರದ ಕಲಶವೊಂದು ಪ್ರತಾಪನ ಕಣ್ಣಿಗೆ ಬಿತ್ತು. ಅದನ್ನು ತರುವ ಅದೃಶ್ಯಸೇವಕಿ ಮಾತ್ರ ಕಾಣಿಸಲಿಲ್ಲ. ಅವಳ ಪಾದದ ಶಬ್ದಮಾತ್ರ ಕೇಳುತ್ತಿತ್ತು. ಚಿತ್ರಾಂಗನು ಆ ತಂಬಿಗೆಯಿಂದ ಕೈ ಕಾಲುಗಳನ್ನು ತೊಳೆದುಕೊಂಡು,—"ಅದೃಶ್ಯಸೇವಕಿ! ಬೇಗನೆ ಅನ್ನ ಬಡಿಸು. ನಾನೀಗ ಕುಬೇರನಬಳಿಗೆ ಹೋಗಬೇಕು" ಎಂದನು.

ಕೂಡಲೇ ಬೆಳ್ಳಿಯಮಣೆಯೊಂದು ಜರುಗಿ ಬಂತು. ಪಂಚಭಕ್ಷ್ಯಪರಮಾನ್ನಗಳು ಬಡಿಸಲ್ಪಟ್ಟುವು. ಈ ಕೆಲಸವೆಲ್ಲಾ ಮಾಡಿದ ಅದೃಶ್ಯಸೇವಕಿಮಾತ್ರ ಪ್ರತಾಪನಿಗೆ ಕಾಣಿಸಲಿಲ್ಲ. ಚಿತ್ರಾಂಗನು ಭೋಜನವನ್ನು ತೀರಿಸಿಕೊಂಡು, ಒಂದು ದೊಡ್ಡ ತೇಗುಬಿಟ್ಟು, ಜುಟ್ಟು ಸರಿಮಾಡಿಕೊಳ್ಳುತ್ತಾ ಕುಬೇರ

నగరక్కె హొరటుహోదను. కూడలే
దీపగళెల్లా ఆరి కత్తలె కవియితు.

అనంతర ప్రతాపను బహళ మర్యాదె
యింద, మధురవాద స్వరదింద, "ఓ
అదృశ్యసేవకి! దయమాడి దీపహచ్చి
బెళకుమాడు" ఎందను. కూడలే దీప
గళు బెళగిదువు. "హసివెయాగుత్తదె;
బడిసుత్తియా?" ఎందను. కూడలే మణె
బంతు. ఎలెబంతు. బడిసిద్దూ పూర్తి
యాయితు—"బా, అదృశ్యసేవకి. యజ
మాననిగె బడిసిదియే హొరతు నీను
ఉండంతె కాణువుదిల్లవల్లా? నీను
కూడా బడిసికో. ఇబ్బరూ కూతుకొండు
ఊటమాడోణ" ఎందను ప్రతాప.

ఆగ ప్రతాపన కివిగె ఒందు ఇంపాద
కంఠస్వరవు కేళ బంతు. "యారప్పా
నీను? బహళ ఒళ్ళెయవనాగిద్ది. ఈ
చిత్రాంగనిగె ఎష్టో నూరువర్షగళింద
సేవెమాడుత్తిద్దేనెయే హొరతు, ఒందు
దినవాదరూ అవను నిన్నహాగె నన్నన్ను
ఆదరదింద మాతాడిసిద్దిల్ల" ఎందితు ఆ
అదృశ్యసేవకియస్వర.

అదృశ్యసేవకికూడా భోజనమాడు
త్తిద్దళు. ఆగ ప్రతాపను, "హాగాదరె
అదృశ్యసేవకి, నీను నన్నొందిగె బందు
బిడు" ఎందను. అదక్కె ఆ కంఠస్వర—
"బరుత్తేనె. ఆదరె నన్నష్టక్కె నానే బర
లారె. 'అదృశ్యసేవకి, నీను నన్నొందిగె



బా' ఎందు ఆజ్ఞాపిసు. ఈ క్షణవే
హొరటు బరుత్తేనె" ఎందితు.

ఇన్నేనిదె? అదృశ్యసేవకియే అవళ
గుట్టన్ను హేళిదళు. ప్రతాపన ఒందే
ఒందు ఆదరద వాక్యవే ఆ భూతవన్ను
వశగొళిసిబిట్టితు. "అదృశ్యసేవకి,
నన్నొందిగె బా" ఎందను. అవనహిందెయే
అవళు నడెదుబరువసద్దు కేళుత్తిత్తు.

కోటెయ హొరగె కాదుకొండిద్ద
కప్పె కణ్ణిగెబీళుత్తలే ప్రతాపను—
"అదృశ్యసేవకి, ఈ కప్పె నన్న ప్రాణ
మిత్ర. ఇదన్నూ నాను బిట్టుబరువంతిల్ల.
నీను నమ్మిబ్బరన్నూ కరెదుకొండు నన్న
అత్తెయమనెగె సేరిసు" ఎందు మధుర
వాగి అప్పణెమాడిదను.

ಕೂಡಲೇ ಅದೃಶ್ಯಸೇವಕಿ, ತಾನು ಅದೃಶ್ಯಳಾಗಿದ್ದೇ, ಕಪ್ಪೆಯನ್ನೂ ಅವನನ್ನೂ, ಅವನ ಅತ್ತೆಯಮನೆಗೆ ಸೇರಿಸಿಬಿಟ್ಟಳು.

ಪ್ರತಾಪನ ಅತ್ತೆ ಎಲ್ಲವನ್ನೂ ತಿಳಿದು ಪ್ರತಾಪನನ್ನು ಕುರಿತು—"ಕಂದಾ, ನಿನ್ನ ಒಳ್ಳೆಯತನವೇ ನಿನಗೆ ಒಳ್ಳೆಯದು ಮಾಡಿತು. ನನ್ನ ಮಗಳ ಮನಸ್ಸನ್ನೂ ಆಕರ್ಷಿಸಿ. ಅವಳು ನಿನಗೆ ಪತ್ನಿಯಾದಳು. ನಿನ್ನ ಆದರವು ಈ ಭೂತವನ್ನು ವಶಪಡಿಸಿಕೊಂಡಿತು. ಬೇಗನೆ ಹೋಗು. ನನ್ನ ಮಗಳು ಆಪತ್ತಿನಲ್ಲಿದ್ದಾಳೆ. ಅವಳನ್ನು ಕಾಪಾಡು" ಎಂದು ಹೇಳಿದಳು.

ಬಳಿಕ ಪ್ರತಾಪನು—"ಅದೃಶ್ಯಸೇವಕಿ, ನನ್ನನ್ನು ಊಹಾನಗರಕ್ಕೆ ಸೇರಿಸು" ಎಂದನು.

ಅಲ್ಲಿಗೆ ಸೇರಿದಕೂಡಲೇ ಪ್ರತಾಪನು, ತನ್ನ ಪತ್ನಿಯನ್ನು ಸೆರೆಮನೆಯಲ್ಲಿಟ್ಟ ವಕ್ರಬುದ್ಧಿ ಮಹಾರಾಜನನ್ನು ಕುರಿತು—"ದುರ್ಮಾರ್ಗದ ದೊರೆಯೆ, ನೀನು ನನಗೆ ಮಾಡಿದ ದ್ರೋಹಕ್ಕೆ ಕ್ಷಮಾಪಣೆ ಕೋರಿಕೊ. ಇಲ್ಲದಿದ್ದರೆ...." ಎಂದು ಅವನು ಹೇಳುವಷ್ಟರಲ್ಲಿ ರಾಜನು—"ಯಾರಲ್ಲಿ? ಇವನನ್ನು ಹಿಡಿದುಕಟ್ಟಿರಿ" ಎಂದು ಆಜ್ಞಾಪಿಸಿದನು.

"ಅದೃಶ್ಯಸೇವಕಿ! ಈ ವೀರರಾಜ ಸೇವಕರಿಗೆಲ್ಲಾ ತಕ್ಕ ಶಾಸ್ತಿ ಮಾಡಿ ಬುದ್ಧಿ ಕಲಿಸು" ಎಂದನು ಪ್ರತಾಪ.

ಅದೃಶ್ಯಸೇವಕಿ ಆ ವೀರರ ಜುಟ್ಟುಗಳನ್ನೆಲ್ಲಾ ಸೇರಿಸಿ ಕಟ್ಟಿ, ದರದರನೆ ಎಳೆದುಕೊಂಡು ಹೋಗಿ ದೂರ ಒಂದು ಮೂಲೆಯಲ್ಲಿ ಕೆಡವಿಹಾಕಿ ಬಂದಳು.

ವಕ್ರಬುದ್ಧಿ ಒರೆಯಿಂದ ಕತ್ತಿಯನ್ನು ಸೆಳೆದುಕೊಂಡು ಪ್ರತಾಪನಮೇಲೆ ಧುಮುಕಿದನು. ಎಲ್ಲರೂ ನೋಡುತ್ತಿರುವಂತೆಯೇ ವಕ್ರಬುದ್ಧಿಯ ತಲೆ ಕೆಳಗಾಯಿತು. ಎರಡು ತಾಳೇಮರದಷ್ಟು ಎತ್ತರಕ್ಕೆ ಏರಿದನು. ಅಲ್ಲಿಂದ ಧಢಾಲ್ಲೆಂದು ನೆಲಕ್ಕೆ ಬಿದ್ದನು. ಅವನ ತಲೆ ನೂರಾರು ಚೂರುಗಳಾದುವು.

ತರುವಾಯ ಊಹಾನಗರಕ್ಕೆ ಪ್ರತಾಪನೇ ರಾಜನಾದನು. ದೇವಕನ್ಯೆ ರಾಣಿಯಾದಳು. ಇಬ್ಬರೂ ಸುಖವಾಗಿದ್ದಾರೆ. ಅದೃಶ್ಯಸೇವಕಿ ಅವನ ಆಜ್ಞಾಧಾರಕಿಯಾಗಿರುವಾಗ, ಬೇರೆ ಸೇನಾಧಿಪತಿ ಯಾಕೆ? ಪ್ರತಾಪನ ರಾಜ್ಯಕ್ಕೆ ಶತ್ರುಗಳೇ ಇಲ್ಲದೆಹೋದರು. ಪ್ರತಾಪನು ಚಕ್ರವರ್ತಿಯಾದನು.






ಬಹಳಕಾಲದಕೆಳಗೆ ಗಾಜಿನಗೂಡು ಎಂಬ ಗ್ರಾಮದಲ್ಲಿ ಮಸ್ತಾನ್ ಎಂಬ ಸಾಹೇಬನೊಬ್ಬನಿದ್ದ. ಅವನಿಗೆ ಹತ್ತಿ ಹಿಂಜುವುದು ಕೆಲಸ. ಆದರೆ ಅದು ಚಿಕ್ಕ ಗ್ರಾಮವಾದುದರಿಂದ ಬರುಬರುತ್ತಾ ಅವನಿಗ ಕೆಲಸ ಸರಿಯಾಗಿ ಸಿಕ್ಕಲಿಲ್ಲ. ಹೊಟ್ಟೆಗೆ ಬಹಳ ಕಷ್ಟವಾಯಿತು.

"ಇದೇನೋ, ಈ ಊರಿನಲ್ಲಿ ಇನ್ನು ಜೀವನ ಸಾಗುವಂತಿಲ್ಲ. ಹೇ ಅಲ್ಲಾ! ಇನ್ನೆಲ್ಲಿ ಹೋಗಲಿ?" ಎಂದು ಯೋಚಿಸಿದನು. ಕಡೆಗೆ ಅರಳೂರಿಗೆ ಹೋಗುವುದೆಂದು ತೀರ್ಮಾನಿಸಿದನು. ಅವನಿಗಿರುವ ಆಸ್ತಿಯೆಂದರೆ ಅವನ ಅರಳೆಹಿಂಜುವ ಬಿಲ್ಲು ಒಂದೇ. ಅದನ್ನು ಭುಜದಮೇಲಿಟ್ಟುಕೊಂಡು ಹೊರಟನು.

ಗಾಜಿನಗೂಡಿಗೂ ಅರಳೂರಿಗೂ ಐದಾರು ಹರದಾರಿಯುಂಟು. ನಡುವೆ ಒಂದು ಅಡವಿ ಕೂಡ ಅಡ್ಡಬರುತ್ತಿತ್ತು. ಕಾಲುನಡಿಗೆಯೇ ಗತಿಯಲ್ಲದೆ ಬೇರೆವಾಹನ ಸೌಕರ್ಯಗಳೇನೂ ಇದ್ದಿಲ್ಲ. ದಾರಿಯಲ್ಲಿ ತಿನ್ನಲಿಕ್ಕೂ ಬೇಕಷ್ಟೆ?

ಹೇಗೋ ಒಂದಾಣೆ ಸಂಪಾದಿಸಿಕೊಂಡು ಒಂದಿಷ್ಟು ಹುರಿಗಡಲೆಯನ್ನು ಕೊಂಡುಕೊಂಡು, ಒಂದೊಂದೇ ಎರಡೆರಡೇ ತಿನ್ನುತ್ತಾ ನಡೆದನು. ಎರಡು ಝಾಮು ವಾಗುವುದರೊಳಗೆ ಕಡಲೆ ಪೂರಾ ಅವನ ಹೊಟ್ಟೆಯೊಳಗೆ ಹೊಕ್ಕುಬಿಟ್ಟವು. ಬಳಿಯಲ್ಲಿದ್ದೊಂದು ಸಣ್ಣ ಕಾಲುವೆಗಿಳಿದು, ಹೊಟ್ಟೆತುಂಬಾ ನೀರುಕುಡಿದನು. ಹಸಿವೆ ಅಡಗಿ ಉತ್ಸಾಹ ಬಂತು. ಭುಜದಲ್ಲಿರುವ ಅರಳೆಹಿಂಜುವ ಬಿಲ್ಲಿನ ಹಗ್ಗವನ್ನು "ಟಿಂ - ಟಿಂ" ಎನಿಸುತ್ತಾ ನಡೆಯುತ್ತಿದ್ದ.

ಚರಚರನೆ ನಡೆಯುತ್ತಿದ್ದ ಮಸ್ತಾನು ಯಾಕೋ ಗಕ್ಕನೆ ನಿಂತುಬಿಟ್ಟ. ಯಾಕೇನು? ಹತ್ತುಗಜದೂರದಲ್ಲಿ ದೊಡ್ಡ ಪಟ್ಟೆ ಹುಲಿಯೊಂದು 'ಗಾಂಡ್ರೆ'ಂದು ಆಕಳಿಸುತ್ತ ನಿಂತಿತ್ತು. ಭಯದಿಂದ ಮಸ್ತಾನಿಗೆ ಬೆವರಿಳಿಯಿತು.ಆದರೂ ಅವನ ಕೈಬೆರಳು ಅರಳೇ ಬಿಲ್ಲನ್ನು 'ಟಿಂಗ ಟಿಂಗನೆ' ಮೀಂಟಿಕೊಂಡೇ ಇದ್ದುವು. ಅಷ್ಟು ಅಭ್ಯಾಸ ಅವನಿಗೆ ಆ ಬಿಲ್ಲಿನಲ್ಲಿ! ಈಗ ಬೆರಳೂ ನಡುಗುತಿದ್ದುವು!

'ಕಮಲಪ್ರಿಯ' - ಮದರಾಸು



ಮಸ್ತಾನನ ಪುಣ್ಯ. ಅವನನ್ನು ನೋಡಿ ಹುಲಿ ನಿಂತೇಹೋಯಿತು. ಆದರೂ ಆದರ ಗಂಟಲು 'ಗಾಂಡ್ರ್' ಗುಟ್ಟಿಕೊಂಡೇ ಇತ್ತು. ಅದು ಅದರ ಅಭ್ಯಾಸವೋ ಏನೋ? ಸಾಹೇಬನ ಬೆರಳೂ 'ಟಿಂಗ ಟಿಂಗ' ಎನಿಸುತ್ತಾ ಇತ್ತು. ಬಿಡಲೇ ಇಲ್ಲ.

ಇದನ್ನೆಲ್ಲಾ ಹೊಂಚಿನೋಡುತ್ತಿದ್ದ ಒಂದು ನರಿ ಮೆಲ್ಲನೆ ಹುಲಿಯಬಳಿಗೆ ಬಂದು— "ಯಾಕೆ ಹುಲಿಮಾವಾ ಸುಮ್ಮನಿದ್ದಿ? ಒಂದೇ ಬಾರಿ ಆ ಮನುಷ್ಯನಮೇಲೆ ಹಾರಿ, ನುಂಗಿ ಬಿಡಬಾರದೆ? ಏನು ಹಾಗೆ ನೋಡುತ್ತಿದ್ದಿ?" ಎಂದು ಪ್ರಶ್ನಿಸಿತು. ಅದಕ್ಕೆ ಹುಲಿ-"ನೋಡಿದಿಯಾ ಅವನ ಕೈಯಲ್ಲಿರುವ ಹೊಸಮಾದರಿಯ ಆ ದೊಡ್ಡ ತುಪಾಕಿ? ನನ್ನನ್ನು ನೋಡಿ ಅವನು ಓಡಿಹೋಗದೆ ನಿಂತಿದ್ದಾನೆ! ಏಕೋ ನನಗೆ ಭಯವಾಗಿದೆ" ಎಂದು ಸತ್ಯವನ್ನೆ ಹೇಳಿತು ಬೆದರುತ್ತಾ.

ನರಿಗೆ ಗೊತ್ತು ಅವನಕೈಯಲ್ಲಿರುವುದು ಖಂಡಿತವಾಗಿಯೂ ತುಪಾಕಿಯಲ್ಲವೆಂದು. ಹುಲಿಯ ಮಂದಬುದ್ಧಿಗೆ ನರಿ ಒಳಗೊಳಗೆ ನಗುತ್ತ—"ಸರಿ ಮಾವಾ, ನಾನಿರುವಾಗ ನಿನಗೇನು ಭಯ? ನಾನು ಹೋಗಿ ಅವನನ್ನು ಮಾತಿಗೆ ತಿರುಗಿಸುತ್ತೇನೆ. ಆ ಸಂಧಿ ನೋಡಿಕೊಂಡು ನೀನು ಮೆಲ್ಲನೆ ಓಡಿಹೋಗು" ಎಂದಿತು.

ಹುಲಿಗೆ ಸಂಶಯಬಂತು. "ಅವನ ಲಕ್ಷ್ಯ ಬೇರೆಕಡೆಗೆ ಹೋಯಿತು ಅಂತ ನನಗೆ ಹೇಗೆ ಗೊತ್ತಾಗುತ್ತದೆ?" ಎಂದು ಕೇಳಿತು. ಅದಕ್ಕೆ ನರಿ, "ಅದಕ್ಕೇನು? ನಾನು ಗಟ್ಟಿಯಾಗಿ ಒಂದು ಕೂಗುಹಾಕುತ್ತೇನೆ. ಅದನ್ನು ಕೇಳುತ್ತಲೇ ನೀನು ಓಡಿಬಿಡು" ಎಂದು ಹೇಳಿಟ್ಟಿತು. ಹುಲಿ "ಹುಂ" ಎಂದಿತು.

ಬಳಿಕ ನರಿ ಒಳದಾರಿಯಿಂದಾಗಿ, ಮಸ್ತಾನನ ಹಿಂದುಗಡೆಯಿಂದ ಬಂದು—"ಏನಯ್ಯ ಸಾಯಿಬರೆ! ಹೀಗೆ ಒಬ್ಬರೇ ನಿಂತಿದ್ದೀರೇಕೆ?" ಎಂದು ಮಾತಾಡಿಸಿತು.

ಮಸ್ತಾನು ಕೋಪದಿಂದ—"ಯಾಕಂದರೆ ಕಾಣುದಿಲ್ಲವೆ? ಎದುರಿನಲ್ಲಿ ಅಷ್ಟು ದೊಡ್ಡ ಹುಲಿ ನಿಂತಿದ್ದರೆ, ಯಾಕೆ ನಿಂತಿದ್ದೀ ಅಂತ ಕೇಳುವುದೆ?" ಎಂದನು.

ಅದಕ್ಕೆ ನರಿ—"ಓಹೋ! ಇಷ್ಟೇನೆ ನಿನ್ನ ಪೌರುಷ? ನಾನೊಂದು ಕೂಗುಹಾಕಿದ

ನೆಂದರೆ ಹುಲೀಗಿಲೀ ಎಲ್ಲಾ ಓಡಿಬಿಟ್ಟೀತು!" ಎಂದಿತು.

ನರಿ ಸುಳ್ಳು ಹೇಳುವುದೆಂದೇ ಸಾಹೇಬ ನಿಗೆ ತೋರಿತು. ಆದರೂ ಪರೀಕ್ಷಿಸಿ ನೋಡ ಬೇಕೆಂದುಕೊಂಡು—"ಹೌದೆ? ಅಷ್ಟು ಶಕ್ತಿ ನಿಜವಾಗಿಯೂ ನಿನ್ನಲ್ಲಿದ್ದರೆ, ನೀನು ಕೇಳುವ ಬಹುಮಾನ ನಾನುಕೊಟ್ಟೇನು" ಎಂದನು.

ಕೂಡಲೇ ನರಿ ಒಂದು ದೊಡ್ಡ ಊಳು ಹಾಕಿತು. ತತ್‌ಕ್ಷಣವೇ ಹುಲಿ ಮಾಯವಾಗಿ ಹೋಯಿತು. ಆಶ್ಚರ್ಯದಿಂದ ಸ್ತಂಭಿತನಾದನು ಮಸ್ತಾನ್. 'ಬದುಕಿದೆಯಾ ಬಡ ಜೀವವೆ' ಎಂದುಕೊಂಡನು.



ಅವನು ಸ್ತಿಮಿತಕ್ಕೆ ಬಂದಕೂಡಲೇ ನರಿ- "ನನ್ನ ಬಹುಮಾನ?" ಎಂದು ಕೇಳಿತು. "ಕೇಳಿಕೋ" ಅಂದನು ಮಸ್ತಾನ್. "ನನಗೆ ಮತ್ತೇನೂಬೇಡ. ನಿನ್ನ ಗುಂಡಿಗೆ ಬೇಕು. ಕೊಡು" ಎಂದಿತು ನರಿ. ಶನಿ ತೊಲಗಿ ಪೀಡೆ ಹತ್ತಿಕೊಂಡಂತಾಯಿತು ಸಾಹೇಬನಿಗೆ.

ಆದರೂ ಅವನು ಒಳ್ಳೇ ಘಾಟೀ ಸಾಹೇಬ! "ಓಸ್, ಇಷ್ಟೇನಾ ನಿನ್ನಕೋರಿಕೆ? ಇನ್ನೇನು ದೊಡ್ಡವಸ್ತು ಕೇಳುವಿಯೋ, ಸಾಧ್ಯವಾಗುತ್ತದೋ ಇಲ್ಲವೋ ಎಂದು ನಾನು ಅನುಮಾನಿಸಿದೆ. ನನಗೆ ಪ್ರಾಣದಾನಮಾಡಿದ ನಿನ್ನ ಋಣವನ್ನು ಎಷ್ಟುಜನ್ಮಕ್ಕಾದರೂ ತೀರಿಸಲಾದೀತೆ? ಆದರೆ ಒಂದುನಿಮಿಷ ತಾಳಿಕೊಂಡಿರಬೇಕು ನೀನು. ಯಾರೇನು ಕೇಳಿದರೂ ನಾನು ಈ ಬಾಯಿಯಿಂದ ಇಲ್ಲ ಎನ್ನಲಾರೆ. ನಿನ್ನಂತೆಯೇ ಒಂದು ತೋಳವು ಬಂದು ನನ್ನ ಹೊಟ್ಟೆಯಲ್ಲಿರುವ ರೊಟ್ಟಿಯ ಚೂರು ಬೇಕೆಂದು ಕೇಳಿತು. ತೆಗೆದುಕೋ ಅಂತ ಹೇಳಿದೆ. ಅದು ನನ್ನಹೊಟ್ಟೆಯೊಳಗೆ ಹೊಕ್ಕು ರೊಟ್ಟಿಚೂರುಗಳನ್ನು ಹೆಕ್ಕುವಾಗ, ಎರಡು ಬೇಟೆನಾಯಿಗಳು ಅದನ್ನು ಹಿಡಿಯಲಿಕ್ಕಾಗಿ ನನ್ನ ಹೊಟ್ಟೆಯೊಳಗೇ ಧುಮುಕಿಬಿಟ್ಟುವು. ಅವುಗಳು ಹೊರಟುಹೋಗಲಿ. ನಂತರ ನೀನು ಹೊಕ್ಕು ನನ್ನಗುಂಡಿಗೆಯನ್ನು ತೆಕ್ಕೊಳ್ಳುವಿಯಂತೆ" ಎಂದು ಬಹಳಸತ್ಯವೆಂಬಂತೆ ಹೇಳಿದ.

"ಬೇಟೆನಾಯಿಗಳು" ಎಂಬ ಶಬ್ದ ಕಿವಿಗೆ ಬೀಳುತ್ತಲೇ, ನರಿ ಒಂದುಕ್ಷಣವೂ ನಿಲ್ಲದೆ ಓಡಿಯೇಹೋಯಿತು. ಮಸ್ತಾನ್ ಅಲ್ಲಾ ಸ್ಮರಣೆಮಾಡುತ್ತ, ನಿರಾಪದವಾಗಿ ತನ್ನ ದಾರೀಹಿಡಿದು ಸಾಗಿದನು.




ಕಲ್ಯಾಣ ನಗರದಲ್ಲಿ ಶರಭಯ್ಯನೆಂಬ ಧನವಂತನೊಬ್ಬನಿದ್ದ. ಆ ಊರಿನಲ್ಲಿ ಅವನಷ್ಟು ದೊಡ್ಡ ಶ್ರೀಮಂತರು ಬೇರೆಯಾರೂ ಇರಲಿಲ್ಲ. ಆದರೆ ಅವನಿಗೆ ಧನಿಕನೆಂಬ ಕೀರ್ತಿಯಷ್ಟೇ ಹೊರತು, ಧರ್ಮಾತ್ಮನೆಂಬ ಹೆಸರೇ ಇಲ್ಲ. ಒಬ್ಬರಿಗೂ ಒಂದು ಕಾಸಾದರೂ ದಾನಮಾಡುವವನಾಗಿರಲಿಲ್ಲ. ಅವನಾಗಿ ದಾನಮಾಡದಿದ್ದರೆ ಹೋಗಲಿ, ಕೇಳಿದವರನ್ನು ಯಾವುದೋ ಒಂದುವಿಧವಾಗಿ ಪೀಡಿಸಿ ಕಾಡಿಸಿ ಓಡಿಸುತ್ತಿದ್ದ. ಅವನಸಂಗತಿ ತಿಳಿದಿದ್ದ ಭಿಕ್ಷುಕರಾರೂ ಅವನ ಮನೆಯಬಾಗಿಲಿಗೆ ಹೋಗುವುದನ್ನೆ ಬಿಟ್ಟುಬಿಟ್ಟಿದ್ದರು.

ಒಮ್ಮೆ ಆ ನಗರಕ್ಕೆ ವೆಂಕಟೇಶನೆಂಬ ಒಬ್ಬ ಯಾತ್ರಿಕನು ಬಂದನು. ಅವನು ಬೀದಿಯಲ್ಲಿ ನಿಂತುಕೊಂಡು, ಆ ಹೊತ್ತಿಗೆ ಎಲ್ಲಿ ಭೋಜನವು ಸಿಕ್ಕುತ್ತೋ ಎಂದು ಆಲೋಚನೆ ಮಾಡುತ್ತಿದ್ದ. ದಾರಿಯಲ್ಲಿ ಒಬ್ಬನನ್ನುಕುರಿತು— "ಅಯ್ಯಾ, ಈ ಹೊತ್ತಿಗೆ ನನಗೆ ಭೋಜನ ಮಾಡಿಕೊಳ್ಳಲಿಕ್ಕೆ ಅನುಕೂಲವಿರುವ ಮನೆಯನ್ನು ತೋರಿಸುವಿರಾ?" ಎಂದು ಕೇಳಿದನು.

"ಊಟಹಾಕುವವರ ಮನೆಯಾವುದೆಂದು ಹೇಳಲಾಗುವುದಿಲ್ಲ. ಆದರೆ ಧರ್ಮಮಾಡದ ಪ್ರಸಿದ್ಧವಾದ ಮನೆಯೊಂದು ಇಲ್ಲಿದೆ. ಆ ಮನೆಯಬಾಗಿಲಿಗೆ ಮಾತ್ರ ಹೋಗಬೇಡ" ಎಂದು ಆತನು ದೂರದಲ್ಲಿ ಕಾಣುವ ಶರಭಯ್ಯನ ಮನೆಯನ್ನು ತೋರಿಸಿದನು.

ಅದಕ್ಕೆ ವೆಂಕಟೇಶನು—"ಏನಯ್ಯಾ, ಆ ಗೃಹಸ್ಥ ಎಂಜಲುಕೈಯಿಂದ ಕಾಗೆಯನ್ನು ಕೂಡ ಓಡಿಸದಂತಹ ಪಿಸುಣಾರಿಯೋ?" ಎಂದು ಕೇಳಿದನು.

"ಹೌದು ಹೌದು. ಒಂದುಕಾಗೆಕೂಡ ಅವನ ಮನೆಯ ಬಳಿಗೆ ಹಾರುವುದಿಲ್ಲ" ಎಂದನು ಆ ಮಾರ್ಗಸ್ಥ.

ವೆಂಕಟೇಶನು ಸ್ವಲ್ಪ ಹಟಗಾರನಾಗಿದ್ದ. ಆ ಶರಭಯ್ಯನ ಸಂಗತಿಯೇನೋ ತಿಳಿದುಬಿಡಬೇಕೆಂದು ತೋರಿತು. ನೇರಾಗಿ ಆ ಶರಭಯ್ಯನ ಮನೆಯಜಗಲಿಯನ್ನೆ ಏರಿದನು.

ಬಾಗಿಲುತಟ್ಟಿದಾಗ ಸಾಕ್ಷಾತ್ ಶರಭಯ್ಯನೇ ಬಂದು ಬಾಗಿಲುತೆರೆದು, "ಏನುಬೇಕು?" ಎಂದು ಕೇಳಿದನು.

ಟಿ. ರಾಜಾರಾವ್ - ಬೆಂಗಳೂರು



ಅದಕ್ಕೆ ವೆಂಕಟೇಶನು—"ಸ್ವಾಮಿ ನಾನೊಬ್ಬ ಯಾತ್ರಿಕ. ಏನೋ ಈ ಒಂದು ಹೊತ್ತಿನ ಊಟಕ್ಕೆ ನಿಮ್ಮಲ್ಲಿ ಅನುಕೂಲ ಮಾಡಿಕೊಡಬೇಕು. ಸಂಜೆಗೆ ಬೇರೆ ಊರಿಗೆ ಹೊರಟುಹೋಗುತ್ತೇನೆ. ಈ ಊರಿನಲ್ಲಿ ಅನ್ನ ದಾತರು ಯಾರೆಂದು ವಿಚಾರಿಸಿದಾಗ ನಿಮ್ಮ ಮನೆಯನ್ನು ತೋರಿಸಿದರು" ಎಂದನು.

ಶರಭಯ್ಯ ಕೊಂಕುನಗೆ ನಗುತ್ತ—"ಹಾಗೋ? ಬಹಳ ಚೆನ್ನಾಯಿತು. ನಾನು ಊಟಕ್ಕೆ ಏಳುವ ಹೊತ್ತಿಗೆ ಸರಿಯಾಗಿಯೇ ಬಂದಿ. 'ಅಭ್ಯಾಗತಃ ಸ್ವಯಂವಿಷ್ಣುಃ' ಅಂದಿದ್ದಾರೆ ಹಿರಿಯರು. ವಿಷ್ಣುಸ್ವರೂಪಿ ಯಾಗಿ ಬಂದಿರುವ ನಿನಗೆ ಔತಣ ಮಾಡ ಬೇಕಲ್ಲದೆ, ಸಾಮಾನ್ಯ ಊಟಹಾಕಿ ಕಳಿಸು ವುದು ನ್ಯಾಯವಲ್ಲ. ಆದ್ದರಿಂದ, ಒಂದು ನಿಮಿಷ ತಾಳು. ಪಂಚಭಕ್ಷ್ಯಪರಮಾನ್ನ ದೊಂದಿಗೆ ಷಡ್ರಸೋಪೇತವಾದ ಅಡುಗೆ ಯನ್ನೆ ಸಿದ್ಧಗೊಳಿಸುವೆನು" ಎಂದನು.

ಶರಭಯ್ಯನ ಮಾತಿನಲ್ಲಿರುವ ವ್ಯಂಗ್ಯಾರ್ಥ ವನ್ನು ವೆಂಕಟೇಶನು ಗ್ರಹಿಸಿದನು. ಆದರೂ ಏನೂ ತಿಳಿಯದವನಂತೆ ನಟಿಸುತ್ತ—"ಅಯ್ಯಾ, ಒಂದು ನಿಮಿಷವೇನು, ಎಷ್ಟು ಹೊತ್ತಾದರೂ ಚಿಂತೆಯಿಲ್ಲ. ಅಷ್ಟಕ್ಕೂ ಈಗ ಹಾಗೇನು ಹೊತ್ತು ಮೀರಿಹೋಗಿಲ್ಲವಷ್ಟೆ?" ಎನ್ನುತ್ತಾ ಅಲ್ಲಿಯೇ ಚಾವಡಿಯಲ್ಲಿ ಕುಳಿತು ಕೊಂಡನು. ತನ್ನ ಮನೆಯಲ್ಲಿ ಅಷ್ಟು ಸಲಿಗೆ ಯಿಂದ ಅವನು ಕುರ್ಚಿಯಲ್ಲಿ ಕುಳಿತುಬಿಟ್ಟು ದನ್ನು ನೋಡಿ ಶರಭಯ್ಯನಿಗೆ ಕೋಪವು ಬಂತು. ಹೇಗೂ ಅವನಿಗೆ ತಕ್ಕಶಾಸ್ತಿ ಮಾಡಿಯೇ ಕಳುಹಿಸುವೆನಾದುದರಿಂದ ಅವ ಸರಪಡಬಾರದೆಂದುಕೊಂಡು, ಕೋಪವನ್ನು ನುಂಗಿಕೊಂಡನು. ವೆಂಕಟೇಶನು ಕಣ್ಣು ಮುಚ್ಚಿಕೊಂಡು, ಮುಂದೇನಾಗುತ್ತದೋ ಎಂದು ಯೋಚನೆಮಾಡುತ್ತಿದ್ದನು.

ಕೊಂಚ ಹೊತ್ತಿಗೆಲ್ಲಾ ಶರಭಯ್ಯ—"ಏಳಯ್ಯಾ ವಿಷ್ಣುಸ್ವರೂಪಾ. ಔತಣ ತಯಾ ರಾಯಿತು. ಏಯ್, ಯಾರೋ ಅಲ್ಲಿ? ಎರಡುಚೆಂಬು ನೀರು ತಾರೋ" ಎಂದನು. ವೆಂಕಟೇಶನು ಕುರ್ಚಿಯಿಂದ ಎದ್ದು ನೀರಿ ಗಾಗಿ ಎದುರುನೋಡಿದನು. ನೀರುಮಾತ್ರ ಯಾರೂ ತರಲಿಲ್ಲ. ಶರಭಯ್ಯ ಯಾರ ಕೈಯಿಂದಲೋ ನೀರು ತೆಗೆದುಕೊಂಡಂತೆ



ಕೊಂಡು–"ಬಾರಯ್ಯಾ ಊಟದಕೋಣೆಗೆ" ಎಂದು ವೆಂಕಟೇಶನನ್ನು ಅಲ್ಲಿಗೆ ಕರೆದು ಕೊಂಡು ಹೋದನು. ಅಲ್ಲಿ ಎರಡು ಮಣೆ ಗಳೂ ಅವುಗಳ ಇದಿರಿನಲ್ಲಿ ಬೆಳ್ಳಿಯ ತಟ್ಟೆ ಗಳೂ, ಅವುಗಳಸುತ್ತೂ ಸಣ್ಣಸಣ್ಣ ಬೆಳ್ಳಿ ಕಪ್ಪುಗಳೂ ಇಡಲ್ಪಟ್ಟಿದ್ದುವು. ಆದರೆ ಪದಾ ರ್ಥಗಳೇನೂ ಇಲ್ಲದೆ ಎಲ್ಲವೂ ಖಾಲಿಯಾ ಗಿಯೇ ಇದ್ದುವು.

ಶರಭಯ್ಯ ಒಂದು ಮಣೆಯ ಮೇಲೆ ಕುಳಿತು, ವೆಂಕಟೇಶನನ್ನು ಇನ್ನೊಂದು ಮಣೆಯಮೇಲೆ ಕೂಡುವಂತೆ ಹೇಳಿದನು. ಅಲ್ಲಿ ಅಡಿಗೆಯುವನಾಗಲಿ, ಬಡಿಸುವವರಾಗಲೀ ಯಾರೂ ಇರಲಿಲ್ಲ. ಶರಭಯ್ಯ ಯಾರೋ ತುಪ್ಪಬಡಿಸುತ್ತಿದ್ದರೆ, ತಾನು ಬೊಗಸೆಯೊಡ್ಡಿ ದಂತೆ ನಟಿಸಿ— "ಸಾಕುಸಾಕು, ಅವನಿಗೆ ಬಡಿಸು" ಎಂದನು. ವೆಂಕಟೇಶನು ಅವನಿ ಗಿಂತ ಚೆನ್ನಾಗಿಯೇ ನಟಿಸುತ್ತ, ನಿಜವಾ ಗಿಯೂ ತುಪ್ಪಕ್ಕೆ ತುಂಬಿ ಕೆಳಕ್ಕೆ ಸೂಸಿದಂತೆ, "ಅರರೆ! ಸಾಕುಸಾಕು!" ಎಂದು, ತಟ್ಟೆಯ ಲ್ಲಿದ್ದ ಸುಳ್ಳಿನ ಅನ್ನವನ್ನು ಕಲಸಿಕೊಳ್ಳಲಿಕ್ಕೆ ಪ್ರಾರಂಭಮಾಡಿದನು.

"ಇವನಾರೋ ಬಹಳ ಗಟ್ಟಿಗನೇಸರಿ" ಎಂದುಕೊಂಡು ಶರಭಯ್ಯ—"ಅನ್ನ ಹುಳೀ ಸಾರು ದಿವಾ ಇರುವಂಥಾದ್ದೆ. ಭಕ್ಷ್ಯಗಳ ರುಚಿ ನೋಡು. ಆ ಕಪ್ಪಿನಲ್ಲಿ ರಸಗುಲ್ಲಾ ಇದೆನೋಡು. ಕಳಕಳಿಸಿಕೊಂಡು ಪಾಕದಲ್ಲಿ ಹೇಗೆ ತೇಲುತ್ತಿದೆ! ಎಲೋ, ಇವನಿಗೆ ಇನ್ನೂ ಸ್ವಲ್ಪ ರಸಗುಲ್ಲಾ ತಂದುಹಾಕು" ಎಂದು

ನಟಿಸಿ, ಹಾಗೆಯೇ ಜಗಲಿಯಬದಿಗೆ ಹೋಗಿ, ಕೈಕಾಲು ಮುಖಗಳನ್ನು ತೊಳೆದುಕೊಂಡಂತೆ ಆಟ ಕಾಣಿಸಿದನು.

ವೆಂಕಟೇಶನಿಗೆ ಆಶ್ಚರ್ಯವಾಯಿತು. 'ನಾಟಕ ಪ್ರಾರಂಭವಾಯಿತೆಂದು' ಗ್ರಹಿಸಿ ದನು. ಬಳಿಕ ಅವನುಕೂಡಾ ಶರಭಯ್ಯ ನಂತೆಯೇ ಚೊಂಬು ತೆಗೆದುಕೊಂಡು ಕೈ ಕಾಲು ಮುಖಗಳನ್ನು ತೊಳೆದುಕೊಂಡಂತೆ ನಟಿಸಿದನು.

ಹೀಗೆ ಅವನೂ ಊಟಕ್ಕೆ ಸಿದ್ಧವಾಗುವ ನೆಂದು ಶರಭಯ್ಯನು ಊಹಿಸಿಕೊಳ್ಳಲಿಲ್ಲ. 'ಎಲ್ಲಿ ನೀರು?' ಎಂದು ಮೇಲೆಕೆಳಗೆ ನೋ ಡುತ್ತಾ ನಿಂತುಕೊಳ್ಳುವನೆಂದು ಮಾಡಿದ್ದ. "ಇವನಾರೋ ಕೊಂಚ ಅಸಾಧ್ಯನಾಗಿಯೇ ಇದ್ದಾನೆ, ಆಗಲಿ ನೋಡೋಣ" ಎಂದು

ಆಜ್ಞಾಪಿಸಿದನು. ಹಾಗು ವೆಂಕಟೇಶನಿಗೆ "ದಾಕ್ಷಿಣ್ಯಮಾಡಬೇಡಯ್ಯ, ಹಾಕಿಸಿಕೋ" ಎಂದನು. ಅದಕ್ಕೆ ವೆಂಕಟೇಶ—"ಆಹಾ! ನಿಮ್ಮ ಅಡುಗೆಯವ ಯಾರೋ ನಳನನ್ನೂ ಭೀಮನನ್ನೂ ಕೊಂದು ಅವರ ತಿಳಿವಳಿಕೆಯೊಂದಿಗೆ ಹುಟ್ಟಿಬಿಟ್ಟಿದ್ದಾನೆ. ಅಮೃತ ಹಸ್ತವೇ ಸರಿ" ಎಂದು ನಾಲಗೆ ಚಪ್ಪರಿಸುತ್ತ, ಕಣ್ಣಿಗೆ ಕಾಣಿಸದ, ಕೈಗೆಸಿಕ್ಕದ ಆ ರಸಗುಲ್ಲಾದ ರುಚಿನೋಡ ತೊಡಗಿದನು.

"ಅರರೆ! ಹಾಗೆ ಎಷ್ಟಪ್ಪಾ ಬಡಿಸುತ್ತಿ? ನನ್ನದೇನು ಹೊಟ್ಟೆಯೋ ಮಡುವೋ! ಎಷ್ಟಂತ ತಿನ್ನಲಿ?" ಎಂದು ವೆಂಕಟೇಶನು ಬಡಿಸುವವನನ್ನು ಕುರಿತು ಹೇಳಿದನು.

ಆಗ ಶರಭಯ್ಯ, "ಸಿಹಿ ತಿನ್ನುವಾಗ ಆ ಪುಳಿಯೋಗರೆಯನ್ನು ನಂಚಿಕೊಳ್ಳಯ್ಯ. ಗೇರು ಬೀಜಗಳನ್ನು ಕರಿದುಹಾಕಿ ಭಲೇ ಪಸಂದಾಗಿದೆ. ಒಂದು ಸವುಂಟು ಪುಳಿಯೋಗರೆ ಅವನಿಗೆ ಹಾಕಯ್ಯಾ. ಹಾಗೇ ಬಜ್ಜಿಗಳನ್ನು ತಾ. ಎರಡೆರಡು ವಡೆಗಳನ್ನೂ ಹಾಕು. ವಡೆಗೆ ಅದ್ದಿಕೊಳ್ಳಲಿಕ್ಕೆ ಒಂದು ಸೌಟು ಮೊಸರು ಹಾಕು" ಎಂದು ವರಸೆಯಾಗಿ ಉಪಚಾರ ಹೇಳುತ್ತಾ ಹೋದನು.

ವೆಂಕಟೇಶನು ಒಂದು ಖಾಲೀಕಪ್ಪನ್ನು ತೋರಿಸಿ,—"ಅಯ್ಯಾ, ಇದರಲ್ಲಿರುವುದೇನೋ ಗೊತ್ತಾಗಿಲ್ಲವಲ್ಲ?" ಎಂದನು, ಅದರಲ್ಲಿ ನಿಜವಾಗಿಯೂ ಏನೋ ಇರುವಹಾಗೆ.

ಅದಕ್ಕೆ ಶರಭಯ್ಯ—"ಅದಾ? ಇನ್ನೂ




ಅದರ ರುಚಿ ನೋಡಿಲ್ಲವೆ? ಅದಕ್ಕೆ ಅವಿಯಲ್ ಅನ್ನುತ್ತಾರೆ. ಮಲೆಯಾಳದ್ದು. ಭಲೇ ರುಚಿಯಾಗಿರುತ್ತೆ" ಎಂದನು.

ಈ ಗೃಹಸ್ಥನು ಈ ನಾಟಕವನ್ನು ಹೀಗೆಯೇ ಕಡೆಗೊಳಿಸಿ ಮುಗಿಸಿಬಿಡುತ್ತಾನೆಂದು ವೆಂಕಟೇಶನಿಗೆ ತಿಳಿದುಹೋಯಿತು. "ಕಡೆಗೆ ತಾಂಬೂಲಕೂಡಾ ಹೀಗೆಯೇ ಕೊಟ್ಟು ಹಸೀಹೊಟ್ಟೆಯಿಂದಲೇ ಕಳುಹಿಸುವುದು ಇವನ ತಂತ್ರ. ಈ ದುರುಳನಿಗೆ ಹೇಗಾದರೂ ಬುದ್ಧಿಕಲಿಸಬೇಕು" ಎಂದು ಯೋಚನೆ ಮಾಡಿದನು.

"ಎಲೆಲಾ! ನನಗೆ ದ್ರಾಕ್ಷಾರಸವೆಂದರೆ ಬಹಳ ಇಷ್ಟವೆಂದು ನಿಮಗೆ ಹೇಗೆ ಗೊತ್ತಾಯಿತು? ಇದು ಬಹಳ ಚೆನ್ನಾಗಿದೆಯಲ್ಲ!" ಎನ್ನುತ್ತಾ ವೆಂಕಟೇಶನು ಅಲ್ಲಿರುವ ಒಂದು

ಖಾಲೀಕಪ್ಪನ್ನು ತೆಗೆದುಕೊಂಡು, ಕುಡಿಯು ವವನಂತೆ ಗುಟುಕರಿಸತೊಡಗಿದ.

"ಭಲೆ! ಶಾಭಾಸ್! ಏನು ಮಾಧುರ್ಯ! ಅಮೃತ!.....ಆಹಾ! ಅಮೃತವೆ! ಏನಂದೆ?.... ಛೇಶ್, ಅಮೃತಕ್ಕೂ ಇದಕ್ಕೂ ಎಲ್ಲಿಯ ಹೋಲಿಕೆ? ಈ ರಸವಮುಂದೆ ಅಮೃತಾ ಗಿಮೃತಾ ಯಾವ ಕಸ? ರಸ! ರಸ!! ದ್ರಾ....ಕ್ಷಾ....ರ ...ಸ್ ಸಾ!" ಎನ್ನುತ್ತಾ ವೆಂಕಟೇಶನು ಎದು ತೂರಾಡುತ್ತಾ ತಲೆಗೆ ಮತ್ತೇರಿದವನಂತೆ ನಟಿಸಿದನು.

ಶರಭಯ್ಯ ಗಾಬರಿಯಾಗಿ "ಏನಿದು?" ಎಂದು ಏಳಲುನೋಡಿದಾಗ, ವೆಂಕಟೇಶನು ಮೈತಿಳಿಯದವನಂತೆ ತಡಬಡಿಸುತ್ತ— "ಏನಿದೂ! ನಾನಿದೂ! ರಸವಿದೂ! ರುಚಿ ಯಿದೂ! ಧ್ರಾಕ್ಷಾರಸವಿದೂ! ಕುಡೀ! ಕುಡೀ! ಕು....ಡೀ....ಡೀ....ಡೀ...." ಎಂದು ಹುಚ್ಚಾಬಟ್ಟೆ ಕೂಗುತ್ತ ಶರಭಯ್ಯನ ಜುಟ್ಟು ಹಿಡಿದು ಬಗ್ಗಿಸಿ, ಅವನ ಬೆನ್ನಿನಮೇಲೆ ದಬ ದಬನೆ ನಾಲ್ಕು ಗುದ್ದುಗಳನ್ನು ಬಿಟ್ಟನು.

ಶರಭಯ್ಯನು "ಕುಯ್ಯೊ ಮುರ್ಯೋ" ಎಂದು ಕೂಗಿದನು. ನಾಲ್ಕಾರುಮಂದಿ ಗುಂಪು ಗೂಡಿದರು. ಶರಭಯ್ಯ ಅಳುತ್ತಾ—"ಈ ದುಷ್ಟನು ನನ್ನಮನೆಗೆ ಊಟಕ್ಕೆ ಬಂದು ನನ್ನನ್ನೆ ಹೊಡೆದ ನೋಡಿ" ಎಂದನು. ಬಂದವರು ವೆಂಕಟೇಶನನ್ನು ನೋಡಿ—"ಏನಪ್ಪಾ, ಅನ್ನ ವಿಕ್ಕಿದವನಿಗೆ ಘಾತಮಾಡಬಹುದೆ?" ಎಂದರು.

ವೆಂಕಟೇಶನು ಮತ್ತಿಳಿದವನಂತೆ ಪಿಳಿಪಿಳಿ ನೋಡುತ್ತ ಪಶ್ಚಾತ್ತಾಪವನ್ನು ನಟಿಸುತ್ತಾ "ಕ್ಷಮಿಸಿರಿ. ಇವನು ನನಗೆಕೊಟ್ಟ ದ್ರಾಕ್ಷರಸ ಪಾನದಿಂದ ನನಗೆ ಮತ್ತೇರಿ ಮೈತಿಳಿಯದೆ, ಏನೋ ಅಪಚಾರಮಾಡಿಬಿಟ್ಟೆನೆಂದು ಕಾಣು ತ್ತದೆ" ಎಂದನು. ಶರಭಯ್ಯ—"ಸುಳ್ಳು ಸುಳ್ಳು! ದ್ರಾಕ್ಷಾರಸವೂ ಇಲ್ಲ. ಏನೂ ಇಲ್ಲ!" ಎಂದನು. "ದ್ರಾಕ್ಷಾರಸವು ಸುಳ್ಳಾದರೆ ಊಟವೂ ಔತಣವೂ ಎಲ್ಲಾ ಸುಳ್ಳೇ" ಎಂದನು ವೆಂಕಟೇಶ.

ಬಂದವರಿಗೆ ಒಂದೂತಿಳಿಯದೆ, ಕಡೆಗೆ ಅಲ್ಲಿಯ ಅಡುಗೆಯವನನ್ನು ಕೇಳಲಾಗಿ ಎಲ್ಲಾ ರಹಸ್ಯವೂ ಗೊತ್ತಾಯಿತು.

"ಆ ಸುಳ್ಳಿನ ಔತಣಕ್ಕೆ ಇವನುಮಾಡಿದ್ದು ಸರಿಯಾಗಿಯೇ ಇದೆ" ಎಂದೆಂದು ಎಲ್ಲರೂ ಅವರವರಪಾಡಿಗೆ ಹೊರಟುಹೋದರು.






ನಮ್ಮ ಗೋಪಿಯೊಬ್ಬ ಸಾಲೆಗಳ್ಳ. ಶಾಲೆಗೆ ಹೋಗುವುದೆಂದರೆ ಅವನಿಗೆ ಬಹಳಸಂಕಟ. ಅವನತಂಗಿ ಸುಶೀಲೆಗಾದರೋ ಕಲಿಯುವುದೆಂದರೆ ತುಂಬಾ ಆಸಕ್ತಿ.

ಅವರ ಮನೆಯ ನಡುವಿನ ಗೋಡೆಯಲ್ಲಿ ಒಂದುದೊಡ್ಡ ಗಡಿಯಾರವಿತ್ತು. ಅದು ಎಲ್ಲಾ ಗಂಟೆಗಳನ್ನೂ ಗಟ್ಟಿಯಾಗಿ ಹೊಡೆಯುತ್ತಿತ್ತು.

ಒಂದುದಿನ ಗೋಪಿ ತಂಗಿಯನ್ನು ಆ ಗಡಿಯಾರದ ಬಳಿಗೆಕರೆದು, "ತಂಗಿ, ಆ ಗಡಿಯಾರದಕಡೆಗೆ ನೋಡು" ಎಂದನು. ಸುಶೀಲೆ ನೋಡಿ "ಎಂಟು ಗಂಟೆಯಾಗಿ ನಲವತ್ತು ನಿಮಿಷವಾಯ್ತು. ಶಾಲೆಗೆ ಹೊತ್ತಾಯಿತು. ಏಳು. ಬಟ್ಟೆತೊಟ್ಟುಕೊ. ಹೊರಡು" ಎಂದು ಅವಸರಪಡಿಸಿದಳು.

ಅದಕ್ಕೆ ಗೋಪಿ— "ಹಾಳುಗಡಿಯಾರ! ಗಡಿಯಾರವೋ ಭೂತವೊ! ಏನೋ ಅವಸರ ಮಾಡುತ್ತೆ. ನಮ್ಮನ್ನು ಮಾತ್ರವಲ್ಲ, ಎಲ್ಲರನ್ನೂ ಇದು ಹೀಗೆಯೇ ಗಡಿಬಿಡಿಪಡಿಸುತ್ತದೆ. ಇದನ್ನು ಏನುಮಾಡಿದರೂ ಪಾಪವಿಲ್ಲ" ಎಂದನು ತುಟಿಕಚ್ಚುತ್ತಾ.

ಅಣ್ಣಾ, ನಿನ್ನನ್ನು ಆಟಕ್ಕೆಬಿಡಲಿಲ್ಲವೆಂದು ಗಡಿಯಾರವನ್ನು ನಿಂದಿಸುವುದೆ? ಇದರಮುಖ ನೋಡಿದರೆ ಎಷ್ಟೋ ಒಳ್ಳೆಯದು! ಗಡಿಯಾರದ ಮುಖನೋಡಿ ಹೋದರೆ ಹೊತ್ತುತಪ್ಪದೆ ಶಾಲೆಗೆ ಸೇರುತ್ತೇವೆ. ಹೊತ್ತಿಗೆ ಹೋದರೆ ಮಾಸ್ಟರು ಮೆಚ್ಚುತ್ತಾರೆ ಬೈಯುವುದಿಲ್ಲ" ಎಂದಳು ಸುಶೀಲೆ.

ಅಷ್ಟರಲ್ಲಿ ಗಡಿಯಾರ ಒಂಭತ್ತುಗಂಟೆ ಹೊಡೆಯಿತು. ಗಂಟೆಯಶಬ್ದ ಕೇಳುತ್ತಲೇ ಅವರತಾಯಿ— "ಶಾಲೆಗೆ ವೇಳೆಯಾಯಿತು. ಹೊರಡಿರಿ" ಎಂದು ಕೂಗುಹಾಕಿದಳು.

ಉಪಾಯವಿಲ್ಲದೆ ಗೋಪಿ ಗಬಗಬನೆ ಪೋಷಾಕು ಧರಿಸಿಕೊಂಡು ಶಾಲೆಗೆ ಹೊರಟನು. ಅವನಹಿಂದೆ ಉತ್ಸಾಹದಿಂದ ಹಾರುತ್ತಾ ಸುಶೀಲೆಯೂ ಹೊರಟಳು.

ಶಾಲೆಗೆ ಹೋಗುತ್ತಿದ್ದಾನೆಂಬ ಮಾತೇ ಹೊರತು, ಗೋಪಿಯ ಲಕ್ಷ್ಯವೆಲ್ಲಾ ನಿತ್ಯವೂ ತನಗೆ ಅಪಕಾರಮಾಡುತ್ತಿರುವ ಆ ಗಡಿಯಾರದಮೇಲೆಯೇ ಇತ್ತು. ಅವನು ಸುಶೀಲೆಯನ್ನುಕುರಿತು "ತಂಗಿ, ನಮ್ಮ ಮನೆಯ ಗೋಡೆ

ಜಿ. ವೀರಭದ್ರ - ಧಾರವಾಡ

ಯಲ್ಲಿರುವ ಗಡಿಯಾರವನ್ನು ಒಳ್ಳೆಯ ಗಡಿಯಾರವೆಂದು ಹೊಗಳುತ್ತಿದ್ದಿ. ಸಣ್ಣವಳಾದ ನಿನಗೆ ಗೊತ್ತಿಲ್ಲ. ಅದೊಂದು ದೆವ್ವ! ಭೂತ! ಅದರ ಹಾಳುಬಾಯಿ ಒಂದುನಿಮಿಷ ಸುಮ್ಮನಿರುತ್ತದೆಯೆ? ರಾತ್ರಿಹಗಲೂ ಎಡೆಬಿಡದೆ ಪಟಪಟಾಂತ ವಟಗುಟ್ಟಿಕೊಂಡೇ ಉಂಟಲ್ಲ? ಅದು ಶಾಲೆಯಹುಡುಗರಿಗೆ ಗಾಬರಿಹುಟ್ಟಿಸುತ್ತದೆ. ಉದ್ಯೋಗಸ್ಥರನ್ನು ನಿಧಾನವಾಗಿ ಊಟಮಾಡಲು ಬಿಡುವುದಿಲ್ಲ. ರೈಲಿಗೆ ಹೋಗುವವರನ್ನು ಓಡಿಸುತ್ತದೆ. ಪಾಪಿಷ್ಠ ಗಡಿಯಾರವದು!" ಎನ್ನುತ್ತ ಮತ್ತೆ ಮತ್ತೆ ಹಲ್ಲುಕಚ್ಚಿದನು.

ಸರಿ, ಹೇಗೋ ಶಾಲೆಗೆಹೋಗಿ ಸೇರಿದ- ಸಾಯಂಕಾಲವಾಯಿತು. ಶಾಲೆ ಬಿಟ್ಟಿತು. ಕೂಡಲೇ ಆಟಕ್ಕಾಗಿ ಓಡಿದ. ಆರುಗಂಟೆಗೆಲ್ಲಾ ಆಟ ಪ್ರಾರಂಭವಾಯಿತು. ಪ್ರಪಂಚವನ್ನೆಮರೆತು ಹುಡುಗರೆಲ್ಲಾ ಆಟವಾಡಿದರು. ಎಲ್ಲರೂ ಒಳ್ಳೆಯ ಆಟದ ರಂಗಿನಲ್ಲಿ ಮೈಮರೆತಿರುವಾಗ, ಗಡಿಯಾರದ ಗಂಟೆಯು ಶಬ್ದವು ಕೇಳಿಸಿತು. ಗೋಪಿ ಗಂಟೆಯನ್ನು ಲಕ್ಷ್ಯ ಮಾಡದೆ ಆಡುತ್ತಲೇ ಇದ್ದ. ಅವನ ತಾಯಿ, "ಗಂಟೆಯಾಯಿತು, ಆಟಸಾಕು! ಮನೆಗೆ ಬಾರೋ!" ಎಂದು ಕರೆದಳು.

ಒಂದುದೊಡ್ಡ ಕೆಲಸಹಾಳಾಗಿ ಹೋದಷ್ಟು ಬಾಧೆಯಾಯಿತು ಗೋಪಿಗೆ. ನೆತ್ತರುಬಿಸಿಯಾಯಿತು. ಆವೇಶ ಬಂದುಬಿಟ್ಟಿತು. ಕೈಗೆ ಸಿಕ್ಕಿದ ಒಂದು ಕಲ್ಲನ್ನು ಎತ್ತಿಕೊಂಡು, ಕಟಕಟನೆ ಹಲ್ಲುಕಡಿಯುತ್ತ, ಗಬಗಬನೆ ಮನೆಯೊಳಗೆ ಬಂದ. ಗುರಿನೋಡಿ ಗಡಿಯಾರದ ಮುಖಕ್ಕೆ ಕಲ್ಲನ್ನುಬೀಸಿದ.

ಗಲಗಲವೆಂದು ಕನ್ನಡಿಚೂರುಗಳು ಕೆಳಗೆ ಚೆಲ್ಲಿದುವು. ಪಾಪ! ಗಡಿಯಾರ ಸುಮ್ಮನಾಯಿತು!

ತಾನೊಬ್ಬ ವೀರನೆಂಬಂತೆ ಗರ್ವದಿಂದ ಗೋಪಿ— "ತಂಗಿ, ಶತ್ರುವನ್ನು ಸಂಹಾರ ಮಾಡಿಬಿಟ್ಟೆ. ಇನ್ನು ಈ ಗಡಿಯಾರದ ಭಯ ನಮಗಿಲ್ಲ. ನಾವು ಹಾಯಾಗಿ ಇಷ್ಟಬಂದಂತೆ ಆಡಿಕೊಳ್ಳಬಹುದು. ಮುಖ್ಯವಾಗಿ ಲೋಕಕ್ಕೇ ಇದರಪೀಡೆ ತೊಲಗಿತು" ಎಂದ.

ಸುಶೀಲೆ ತಟಸ್ಥಳಾದಳು. ತಂದೆ ಬಂದ ಮೇಲೆ ಗೋಪಿಗೆ ನಡೆಯುವ ಉಪಚಾರವನ್ನು ನೆನೆದು ಅವಳಿಗೆ ಭಯವಾಯಿತು.



1

2









# ಇಂದಿನ ಮಕ್ಕಳು  ಮುಂದಿನ ಜನಾಂಗ







3

4

1. ಚಿ. ಕುಮಾರಿ ವತ್ಸಲಾ - ಮೈಸೂರು
2. ಚಿ. ಸತೀಶ್ ಜೋಷಿ - ಬೊಂಬಾಯಿ
3. ಚಿ. ಕೆ. ವಿವೇಕಾನಂದ ಶಾನಭಾಗ - ಹೊನ್ನಾವರ
4. ಚಿ. ಶೀಲಾ - ಕಣಬರಗಿ

## ಮುಖಪುಟದ ಚಿತ್ರ

ಮಹಾ ಭಾರತದಲ್ಲಿ ಪಂಚಪಾಂಡವರನ್ನು ಅರಿಯದವರೇ ಇಲ್ಲ. ಪಾಂಡು ಮಹಾ ರಾಜನೇ ಪಾಂಡವರ ತಂದೆ. ಅವನ ಪಟ್ಟದ ರಾಣಿ ಕುಂತೀದೇವಿ. ಒಮ್ಮೆ ಪಾಂಡುರಾಜನ ಒಂದು ಅಪಚಾರದಿಂದಾಗಿ, ಕಿಂದಮನೆಂಬ ಋಷಿ ಅವನಿಗೆ ಮಕ್ಕಳಾಗದಂತೆ ಶಾಪ ಕೊಟ್ಟನು. ಅದರಿಂದ ಪಾಂಡುರಾಜನು ವಿರಕ್ತನಾಗಿ 'ಶತಶೃಂಗ' ಪರ್ವತದಲ್ಲಿ ವಾಸಮಾಡುತ್ತಿದ್ದ.



ಹಿಂದೊಮ್ಮೆ ದೂರ್ವಾಸ ಮಹರ್ಷಿ ಕುಂತಿಗೆ ಒಂದು ಮಂತ್ರವನ್ನು ಉಪದೇಶ ಮಾಡಿ, "ಇದನ್ನು ಪಠಿಸಿ ನಿನ್ನ ಇಷ್ಟದೇವರನ್ನು ಸ್ಮರಿಸಿಕೊ. ಆ ದೇವರು ನಿನಗೆ ಪ್ರತ್ಯಕ್ಷರಾಗಿ ಕೀರ್ತಿಪ್ರದರಾದ ಪುತ್ರರನ್ನು ಪ್ರಸಾದಿಸುತ್ತಾರೆ" ಎಂದು ವರವಿತ್ತಿದ್ದ. ಈ ರಹಸ್ಯವನ್ನು ಅವಳು ತನ್ನ ಪತಿಯೊಡನೆ ಹೇಳಿದಳು. ಪಾಂಡುರಾಜನು ಬಹಳ ಸಂತೋಷಪಟ್ಟು, ಮೊದಲು ಧರ್ಮಜ್ಞನಾದ ಪುತ್ರನನ್ನು ಪಡೆಯಬೇಕೆಂದು ಸಲಹೆ ಮಾಡಿದನು. ಪತಿಯ ಆಜ್ಞೆಯಂತೆ ಕುಂತಿ ಧರ್ಮದೇವರನ್ನು ಆಹ್ವಾನಿಸಿ, ಯುಧಿಷ್ಠಿರನನ್ನು ಪಡೆದಳು.

ತರುವಾಯ ಕ್ಷತ್ರಿಯರಿಗೆ ಭುಜಬಲವೇ ಮುಖ್ಯವಾದುದರಿಂದ, ಮಹಾ ಬಲಶಾಲಿಯಾದ ಮಗನನ್ನು ಪಡೆಯಬೇಕೆಂದು ಪಾಂಡುರಾಜನು ಪತ್ನಿಯೊಡನೆ ಕೋರಿಕೊಂಡನು ಅದರಂತೆ ಕುಂತಿ, ವಾಯುದೇವನ ಅನುಗ್ರಹದಿಂದ, ಭೀಮನನ್ನು ಪಡೆದಳು. ಹೀಗೆಯೇ ಪಂಚಪಾಂಡವರು ಹುಟ್ಟಿದರು.

ಭೀಮನ ಕಥೆ ಬಹಳ ವಿಚಿತ್ರ! ಅವನು ಹುಟ್ಟಿದ ಹತ್ತನೇದಿನ ಕುಂತಿ ನದಿಯಲ್ಲಿ ಮಿಂದು, ಪೂಜೆಗಾಗಿ ಮನೆಗೆ ಬರುತ್ತಿದ್ದಳು. ಪತಿಯೂ ಜತೆಯಲ್ಲಿದ್ದ. ಆಗ ಆಕಸ್ಮಿಕವಾಗಿ ಒಂದು ಹೆಬ್ಬುಲಿ ಘರ್ಜಿಸುತ್ತಾ ಓಡಿಬಂತು. ಕುಂತಿ ಬೆದರಿ ಒಂದು ಬಂಡೆಯನ್ನೇರಿದಳು. ಆಗ ಅವಳ ಕಂಕುಳಲ್ಲಿದ್ದ ಶಿಶು ಕೈ ಜಾರಿ ಧೊಪ್ಪೆಂದು ಬಿದ್ದುಹೋಯಿತು. ಇಷ್ಟರಲ್ಲಿ ಪಾಂಡುರಾಜನು ಬಿಲ್ಲುಬಿಟ್ಟು ಆ ಹುಲಿಯನ್ನು ಕೊಂದುಬಿಟ್ಟನು.

ಇಬ್ಬರೂ ಗಾಬರಿಯಾಗಿ ಮಗುವಿನ ಕಡೆಗೆ ನೋಡಿದರೆ, ಆ ಮಗುವಿಗೆ ಕೊಂಚವಾದರೂ ಗಾಯವಾಗಿರಲಿಲ್ಲ! ಬದಲಾಗಿ ಮಗುವಿನ ಪೆಟ್ಟಿನಿಂದ ಕೆಳಗಿದ್ದ ಬಂಡೆಗಲ್ಲುಗಳೆಲ್ಲ ಪುಡಿಯಾಗಿ ಹೋಗಿದ್ದುವು!! ಭೀಮ ಏನೂ ನೋವಿಲ್ಲದೆ ಉಯ್ಯಾಲೆಯಲ್ಲಿ ಮಲಗಿಕೊಂಡು ಆಡುವಂತೆ ಉತ್ಸಾಹದಿಂದ ನಗುತ್ತ ಆಡುತ್ತಿದ್ದ! ಈ ಭೀಮನೇ ಬೆಳೆದು, ಅಪ್ರತಿಮ ಬಲಶಾಲಿಯಾಗಿ ದೊಡ್ಡ ದೊಡ್ಡ ರಾಕ್ಷಸರನ್ನೆಲ್ಲ ಕೊಂದು ಪ್ರಖ್ಯಾತನಾದನು.

ಆ ಸಂಜೆಯಲ್ಲಿಯೇ ಬಾದಷಹನ ದಿವ್ಯ ಭವನದಲ್ಲಿ ದರ್ಬಾರಿಗೆ ಏರ್ಪಾಡಾಯಿತು. ದೇಶ ದೇಶಗಳಿಂದ ಬಂದ ಪ್ರಮುಖರಿಂದ ದರ್ಬಾರು ತುಂಬಿ ಕಣ್ಣಿಗೆಹಬ್ಬವನ್ನುಂಟು ಮಾಡಿತು.

ಆ ಗುಂಪಿನಲ್ಲಿ ನಮ್ಮ ಅಡಿಗೆಯಚಿಣ್ಣಿ ಕೂಡಾ ಇದ್ದಳು. ಅಂದಂತೆ....ಈಗ ಅವಳಿಗ ದೊಡ್ಡ ಪದವಿ ಸಿಕ್ಕಿಬಿಟ್ಟಿತ್ತು. ಬಹಳ ಪ್ರಸಿದ್ಧವಾದ ಆ ಬುಲ್ ಬುಲ್ ಪಕ್ಷಿಗೆ ಅವಳು ಸ್ನೇಹಿತೆಯಲ್ಲವೆ? ಅವಳೇ ಅದನ್ನು ಬಾದಷಹನ ಬಳಿಗ ಆಹ್ವಾನಿಸಿದವಳಲ್ಲವೆ? ಅವಳ ಸಹಾಯದಿಂದಲ್ಲವೇ ಬಾದಷಹನು ಅದರ ಮಧುರಗಾನವನ್ನು ಕೇಳುವಂತಾಯಿತು? ಆದುದರಿಂದ ಆ ಅಡಿಗೆಯಚಿಣ್ಣಿಗೆ ಅದೃಷ್ಟಬಂತು; ಅಡಿಗೇಶಾಲೆಗ ಅವಳೇ ಈಗ ಮುಖ್ಯಾಧಿಕಾರಿಣಿ.



ಹೀಗ ದೊಡ್ಡ ಪದವಿಗೆ ಏರಿರುವ ಆ ಚಿಣ್ಣಿ, ದರ್ಬಾರು ಮಂಟಪದ ದ್ವಾರದ ಹತ್ತಿರ ನಸುನಾಚಿಗೆಯಿಂದ ನಿಂತುಕೊಂಡು, ಬಾದಷಹನನ್ನು ಕಣ್ಣುತುಂಬಾ ನೋಡುತ್ತಿದ್ದಳು.

ತುಂಬಿದ ದರ್ಬಾರಿನಲ್ಲಿ ಅಪರೂಪವಾದ ಆ ಬುಲ್ ಬುಲ್ ಪಕ್ಷಿ ಅತ್ಯದ್ಭುತವಾಗಿ ಹಾಡಲು ತೊಡಗಿದಾಗ, ಸಭೆಯಲ್ಲಿದ್ದವರ ಹೃದಯವು ಕರಗಿಯೇ ಹೋಯಿತು. ಬಾದಷಹನ ಎರಡು ಕಣ್ಣುಗಳಿಂದಲೂ, ಅವನಿಗೆ ತಿಳಿಯದಂತೆಯೇ ಆನಂದಬಾಷ್ಪವು ತುಂಬಿ

## ಹಿಂಬದಿಯ ಚಿತ್ರ

ಕೆಳಗಿಳಿಯಿತು. ಅವನು ಬುಲ್ ಬುಲ್ ಹಾಡಿಗೆ ಬಹಳ ತನ್ಮಯನಾಗಿ ಮೆಚ್ಚಿ, ಅದು ಸಂತೋಷವಾಗುವಂತೆ ಅದನ್ನು ಅಲಂಕರಿಸಬೇಕೆಂದು ತನ್ನ ಉದ್ದೇಶವನ್ನು ಅಪ್ಪಣೆಮಾಡಿದನು. ಆದರೆ ಆ ಪಕ್ಷಿ ಅತ್ಯಂತ ವಿನಯದಿಂದ "ಮಹಾಪ್ರಭು! ಅಂತಹ ಆಡಂಬರಗಳೊಂದೂ ನನಗೆ ಬೇಡ. ತಮ್ಮ ದಯವಿದ್ದರೆ ಸಾಕು" ಎಂದಿತು.

ಅಂದಿನಿಂದ ಆ ರಾಜ್ಯದೊಳಗೆ ಎಲ್ಲಿ ನೋಡಿದರೂ ಬುಲ್ ಬುಲ್ ಪಕ್ಷಿಯ ಮಾತೇನಾತು!

ಬಾದಷಹನು ಅದಕ್ಕೆ ಬೇಕಾದ ಸಮಸ್ತಮರ್ಯಾದೆಗಳನ್ನೂ ಮಾಡಿದನು. ಅದು ಇದ್ದಷ್ಟುಹೊತ್ತೂ ತನ್ನ ಪ್ರತ್ಯೇಕವಾದ ಬಂಗಾರದ ಪಂಜರದಲ್ಲಿ ಇರಗೊಟ್ಟನು. ಅದಕ್ಕಿಚ್ಛೆಯಾದಾಗ ಆನಂದದಿಂದ ಗಾಳಿಯಲ್ಲಿ ವಿಹರಿಸಲು ಬಿಟ್ಟನು. ಅದರ ವಿಹಾರವೂ ಒಂದು ವಿಚಿತ್ರದೃಶ್ಯವಾಗಿತ್ತು. ಹನ್ನೆರಡುಮಂದಿ ಜವಾನರು, ಹನ್ನೆರಡು ಪಟ್ಟೇದಾರಗಳನ್ನು ಅದರಕಾಲಿಗೆ ಸಿಕ್ಕಿಸುವರು; ಬಳಿಕ ಒಬ್ಬೊಬ್ಬರೊಂದೊಂದರಂತೆ ಕೈಯಲ್ಲಿ ಹಿಡಿದುಕೊಂಡು ಪಕ್ಷಿಯನ್ನು ಹಾರಿಸುತ್ತಿದ್ದರು. ಇದುವೇ ಪದ್ಧತಿಯಾಗಿತ್ತು.

# ಇಂದ್ರ

## ವಿಚಿತ್ರ ಇಸ್ಪೀಟು ಟ್ರಿಕ್ಕು

ಐಂದ್ರಜಾಲಿಕನು ೫೩ ಇಸ್ಪೀಟು ಎಲೆಗಳ ಪ್ಯಾಕನ್ನು ತರಬೇಕು. ೫೩ ನೇ ಎಲೆಯೇ 'ಜೋಕರ್' ಎಲ್ಲಾ ಎಲೆಗಳನ್ನೂ ಕಲಸಿ ಒಂದನ್ನುಮಾತ್ರ ಕೋರಿಕೊಳ್ಳುವಂತೆ ಪ್ರೇಕ್ಷಕರಿಗೆ ಹೇಳಬೇಕು. ಕೋರಿಕೊಂಡ ಆ ಎಲೆಯನ್ನು ಐಂದ್ರಜಾಲಿಕನು ನೋಡದೆಯೇ, ಪ್ಯಾಕಿನ ಮೇಲುಭಾಗದಲ್ಲಿಡಬೇಕು. ಅನಂತರ ಪ್ಯಾಕನ್ನು ಕಲಸದೆ ಎರಡು ಮೂರು ಸಾರಿ ಕೊಯ್ಯಬೇಕು. ಆಗ ಅವನು "ಓಹ್, ಮರೆತೆ. ಈ ತಮಾಷೆಗೆ ಜೋಕರ್ ಬೇಡ. ಅದನ್ನು ತೆಗೆದು ಹಾಕುತ್ತೇನೆ" ಎಂದು ಹೇಳಿ, ಆ ಜೋಕರ್ ಎಲ್ಲಿ ಇದೆಯೋ ಹುಡುಕಿ ಎಳೆದು ತೆಗೆಯಬೇಕು. ಆಮೇಲೆ ಎಲೆಗಳನ್ನೆಲ್ಲ ಸರಿಯಾಗಿ ಒಂದೇಕೈಯಲ್ಲಿ ಹಿಡಿದುಕೊಂಡು, ಒಂದೊಂದೇ ಎಣಿಸುವಂತೆ 'Y-O-U—H-A-V-E-S-E-L-E-C-T-E-D—T-H-I-S' ಎನ್ನುತ್ತಾ ಒಂದೊಂದು ಅಕ್ಷರಕ್ಕೆ ಒಂದೊಂದು ಎಲೆಯನ್ನು ಮೇಜಿಯಮೇಲೆ ಇಡಬೇಕು. ಕಡೆಗೆ S ಎಂದು ಬಂದ ಎಲೆಯನ್ನು "ಇದೊ?" ಎಂದು ಪ್ರೇಕ್ಷಕರಿಗೆ ತೋರಿಸಿ ನೋಡಿದರೆ, ಅವರ ಮುಖವೈಖರಿಯಿಂದ ಅದಲ್ಲವೆಂದು ತಿಳಿದುಹೋಗುತ್ತದೆ. ಆಗ ಪುನಃ ಎಲೆಗಳನ್ನೆಲ್ಲಾ ಕ್ರಮತಪ್ಪದಂತೆ ತೆಗೆದು ಆ ಮಿಕ್ಕ ಎಲೆಗಳ ಮೇಲೆ ಇಟ್ಟು, ಪುನಃ ಒಂದೊಂದೇ ಲೆಕ್ಕಮಾಡುವಂತೆ 'S-O-R-C-A-R-P-L-E-A-S-E-S-A-Y-N-O-W' ಎಂದು ಅಕ್ಷರಕ್ಕೆ ಒಂದೊಂದರಂತೆ ಮೇಜಿಯಮೇಲೆ ಇಟ್ಟರೆ, ಕಡೆಗೆ W ಎಂಬ ಅಕ್ಷರದೊಂದಿಗೆ ಬಂದ ಎಲೆಯಾವುದೋ ಅದೇ ಪ್ರೇಕ್ಷಕರು ಕೋರಿಕೊಂಡ ಎಲೆಯಾಗುತ್ತದೆ.

ಇದರ ಗುಟ್ಟು ಈಗ ಹೇಳುತ್ತೇನೆ. ಮೊತ್ತಮೊದಲು ಪ್ಯಾಕು ತರುವಾಗಲೇ, ಆ ಜೋಕರನ್ನು ಅಡಿಯಲ್ಲಿರುವ ಕಡೇ ಎಲೆಯ ಮೇಲಿನಿಂದ ಇಟ್ಟಿರಬೇಕು. ಅಂದರೆ



# ಜಾಲ

ಜೋಕರಿನ ಕೆಳಗೆ ಒಂದು ಎಲೆಯೂ, ಮೇಲೆ ೫೧ ಎಲೆಯೂ ಇವೆ ಎಂದಾಯಿತು. ಪ್ಯಾಕನ್ನು ಕಲಸುವಾಗ ಅಡಿಯ ಎರಡೆಲೆಗಳು ವ್ಯತ್ಯಾಸವಾಗದಂತೆ ನೋಡಿಕೊಳ್ಳಬೇಕು. ಮಿಕ್ಕ ಎಲೆಗಳನ್ನು ಹೇಗೆಕಲಸಿದರೂ ಬಾಧಕವಿಲ್ಲ. ಪ್ರೇಕ್ಷಕರು ಕೋರಿಕೊಳ್ಳುವ ಎಲೆ, ಆ ಅಡಿಯ ಎರಡು ಎಲೆಗಳ ಹೊರತು ಬೇರೆಯಾವುದೂ ಆಗಬಹುದು. ಆ ಮೇಲೆ, ಪ್ಯಾಕನ್ನು ಕೊಯ್ಯಬೇಕೇ ಹೊರತು ಕಲಸಬಾರದು. ಬಳಿಕ ಜೋಕರು ಬೇಡವೆಂದು ಹೇಳಿ ಅದನ್ನು ಹುಡುಕಿ ಎತ್ತಿತೆಗೆದು ಸರಿಯಾಗಿ ಅದೇಸ್ಥಳದಿಂದ ಪ್ಯಾಕನ್ನು ಎರಡು ಭಾಗವಾಗಿ ಮಾಡಬೇಕು. ಆಗ ಏನಾಯಿತುಗೊತ್ತೇ? ಪ್ರೇಕ್ಷಕರು ಕೋರಿಕೊಂಡ ಎಲೆ ತನ್ನಂತೆ ಪ್ಯಾಕಿನ ಮೇಲುಭಾಗಕ್ಕೇ ಬಂದು ಬಿಟ್ಟಿತು. ಅದರಕೆಳಗೆ ೫೦ ಎಲೆಗಳೂ ಮೇಲೆ ಒಂದು ಎಲೆಯೂ ಮಾತ್ರವೇ ಇರುತ್ತವೆ. ಐಂದ್ರಜಾಲಿಕನು ಹುಡುಕ ಬೇಕಾದ ಅವಶ್ಯವೇ ಇಲ್ಲ. ಮೊದಲು 'You have Selected This ಎನ್ನುತ್ತ ಎಲೆಗಳನ್ನು ಎಣಿಸಿದಾಗ ಆ ಎಲೆ ಕೆಳಗೆ ಬರುತ್ತದೆ ಎರಡನೆಬಾರಿ 'ತಪ್ಪಿದೆನು' ಎನ್ನುತ್ತ ಆ ಎಲೆಯನ್ನು ಮೇಲೆ ಇಟ್ಟು ಪುನಃ 'Sorcar, Please Say Now' ಎಂದು ಒಂದೊಂದೇ ಎಲೆಯನ್ನು ಮೇಜಿಯಮೇಲೆ ಇಡುವಾಗ W ಎಂಬ ಅಕ್ಷರದೊಂದಿಗೆ ಬರುವುದೇ ಪ್ರೇಕ್ಷಕರುಕೋರಿದ್ದು.

---

ಈ ಗಾರುಡಿಯ ವಿಷಯ ಇನ್ನೂ ವಿವರವಾಗಿ ತಿಳಿಯಬೇಕಾದರೆ ಓದುಗರು 'ಚಂದಮಾಮ'ನ ಹೆಸರನ್ನು ಉದಾಹರಿಸಿ ನೇರಾಗಿ ಪ್ರೊಫೆಸರರಿಗೇ ಬರೆಯಬೇಕು. ಕಾಗದಗಳನ್ನು ಇಂಗ್ಲಿಷಿನಲ್ಲಿಯೇ ಬರೆಯಬೇಕೆಂಬುದು ಮುಖ್ಯ.

ವಿಳಾಸ: ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್
12/3/A, ಜಮಿಾರ್‌ಲೇನ್, ಬಾಲಿಗಂಜ್, ಕಲಕತ್ತಾ - 19

## ಒಂದೇ ಗೆರೆಯ ಚಿತ್ರ




ವಿ. ಪೂರ್ಣಾನಂದ ಶರ್ಮ - ವೆಲ್ಲಟೂರು

---

ಕಳೆದ ತಿಂಗಳಿನ ಚಂದಮಾಮ ೧೨ ನೇ ಪುಟದ ಚಿತ್ರಗಳ ತಪ್ಪುಗಳು :

1. ಹಕ್ಕಿಗೆ ಕಾಲುಗಳಿರಬೇಕು.
2. ಚೂರಿಗೆ ಹಿಡಿ ದೊಡ್ಡದಿರಬೇಕು.
3. ಸಣ್ಣ ಮುಳ್ಳು 10-11 ರ ಮಧ್ಯದಲ್ಲಿರಬೇಕು.
4. ಗಂಟೆಗೆ ನಾಲಗೆ ಇರಬೇಕು.
5. ಪತಂಗಕ್ಕೆ ಮೀಸೆಗಳಿರಬೇಕು.
6. ಕೊಂಬೆಯಲ್ಲಿ ಮಾವಿನಕಾಯಿ ಇರಬೇಕು.
7. ಕಪ್ಪೆಯ ಕಾಲುಗಳು ಬಾತಿನಕಾಲುಗಳಂತಿರಬೇಕು.
8. ತುಬಾಕಿಗೆ ಬಟನ್ ಇರಬೇಕು.
9. ಆನೆಗೆ ದಂತವು ಬಾಯಿಯಲ್ಲಿರಬೇಕು.

## ಫೋಟೋ ಶೀರ್ಷಿಕೆಯ ಸ್ಪರ್ಧೆ

ಅಕ್ಟೋಬರ್ ಫೋಟೋಗಳ ಫಲಿತಾಂಶ

★

ಅಕ್ಟೋಬರ್ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀ ರ್ಷಿ ಕೆ :

ಮೊದಲನೇ ಫೋಟೋ : 'ನೀರಿನೆಡೆಗೆ'
ಎರಡನೇ ಫೋಟೋ : 'ಊರಿನಕಡೆಗೆ'

ಕ ಳಿ ಸಿ ದ ವ ರು :

ಎಚ್. ಸಂಜೀವರಾವ್, ಸುರತಕಲ್ಲು
ಮಂಗಳೂರು, ದ. ಕ.

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಅಕ್ಟೋಬರ್ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಅಕ್ಟೋಬರ್ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

## ನವಂಬರ್ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

---

## ಮುಖ್ಯ ಸೂಚನೆ :

ನೀವು ಕಳುಹಿಸುವ ಶೀರ್ಷಿಕೆಗಳನ್ನು ಕಾರ್ಡಿನಲ್ಲಿಯೇ ಬರೆದುಕಳಿಸಬೇಕು. ಕೆಲವರು ಕಾಗದದಲ್ಲಿಬರೆದು ಕವರಿನಲ್ಲಿ ಕಳುಹಿಸುತ್ತಾರೆ. ಇಂತಹವುಗಳು ಪರಿಶೀಲಿಸಲ್ಪಡುವುದಿಲ್ಲ.

# ಫೋಟೋ ಶೀರ್ಷಿಕೆಯ ಸ್ಪರ್ಧೆ

ನವೆಂಬರ್ 1952 : : ಬಹುಮಾನ 10/- ರೂ.





ನವೆಂಬರ್ ಸಂಚಿಕೆಯಲ್ಲಿ ಬರುವ ಫೋಟೋಗಳು ಮೇಲೆ ಕಾಣಿಸಿರುತ್ತವೆ
ಇವುಗಳಿಗೆ ತಕ್ಕ ಒಂದು ಜತೆ ಶೀರ್ಷಿಕೆ ಬೇಕು.

1. ಶೀರ್ಷಿಕೆಗಳು ಫೋಟೋವಿಗೆ ಸರಿಹೊಂದುವಂತಿರಬೇಕು.
2. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು.
3. ಮುಖ್ಯವಾಗಿ ಮೊದಲನೆಯ ಫೋಟೋವಿಗೂ ಎರಡನೆಯ ಫೋಟೋವಿಗೂ, ಒಂದಕ್ಕೊಂದು ಸಂಬಂಧಿಸಿಕೊಂಡಿರುವ ಮಾತುಗಳ ವಾಕ್ಯಗಳಾಗಿರಬೇಕು.
4. ಒಬ್ಬೊಬ್ಬರು ಒಂದೊಂದು ಜತೆ ವಾಕ್ಯಗಳಿಗಿಂತ ಹೆಚ್ಚಿಗೆ ಕಳಿಸಕೂಡದು.
5. ಒಂದು ಕಾರ್ಡಿನಲ್ಲಿ ನೀವು ಕಳುಹಿಸುವ ಶೀರ್ಷಿಕೆಗಳೂ, ನಿಮ್ಮ ಹೆಸರು, ವಿಳಾಸಗಳೂ ಸ್ಪಷ್ಟವಾಗಿರಬೇಕು.
6. ಸೆಪ್ಟೆಂಬರ್ 15-ನೇ ತಾರೀಕಿನೊಳಗೆ ವಾಕ್ಯಗಳು ನಮಗೆ ಬಂದು ಸೇರಬೇಕು. ಅನಂತರ ಬಂದುವುಗಳಿಗೆ ಗಮನಕೊಡಲಾಗುವುದಿಲ್ಲ.
7. ನಮಗೆ ಸೇರಿದ ವಾಕ್ಯಗಳಲ್ಲೆಲ್ಲಾ ಅತ್ಯುತ್ತಮವಾದ ಒಂದು ಜತೆಗೆ (ಅಂದರೆ ಎರಡು ಫೋಟೋ ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುವುದು.
8. ಶೀರ್ಷಿಕೆ ವಾಕ್ಯಗಳನ್ನು ಕಳುಹಿಸಬೇಕಾದ ವಿಳಾಸ:

: ಫೋಟೋ ಶೀರ್ಷಿಕೆಯ ಸ್ಪರ್ಧೆ :

**ಚಂದಮಾಮ ಪಬ್ಲಿಕೇಷನ್ಸ್** ವಡಪಳನಿ ಪೋಸ್ಟ್ :: ಮದರಾಸು - 26.

# ವಿಜಯ

## ರವರ ಚಿತ್ರಗಳು

## ವಿನೋದಕ್ಕೆ
## ವಿಜ್ಞಾನಕ್ಕೆ
## ಸಾಟಿಯಿಲ್ಲದವು




**VIJAYA PRODUCTIONS LTD.**

Lessees of Vauhini Studios

MADRAS - 26

Printed by B. NAGI REDDI at the B. N. K. Press Ltd. Madras-26 and Published by him

Photo by Anant Desai



ಬಹುಮಾನ
ಪಡೆದ ಶೀರ್ಷಿಕೆ

ಸಲ್ಲಾಪ

ಕಳಿಸಿದವರು :
ಪಿ. ರಾಯಪ್ಪಬಸ್ತಿ, ಕಣಬರಗಿ

